# ಕನ್ನಡದಲ್ಲಿ ಕೈಲಾಸ ಪ್ರವಾಸ ಕಥನಗಳು

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ನಿಬಂಧ)


◆ ಸಂಶೋಧಕರು ◆

**ಸುರೇಶ ಬಿ. ಉಕ್ಕಲಿ**

ಸಿ. ಎಲ್.ಇ. ಸಂಸ್ಥೆಯ ಶ್ರೀ ಬಿ. ಸಿ. ಗಂಗಾಲ ಶಿಕ್ಷಣ ಮಹಾವಿದ್ಯಾಲಯ,

ಚಿಕ್ಕೋಡಿ. ಜಿಲ್ಲೆ : ಬೆಳಗಾವಿ


BRDHSKS - 00574


◆ ಮಾರ್ಗದರ್ಶಕರು ◆

**ಡಾ. ವ್ಹಿ. ಎಸ್. ಮಾಳಿ**

ನಿರ್ದೇಶಕರು,

ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ ಹಾರೂಗೇರಿ. ಜಿಲ್ಲೆ : ಬೆಳಗಾವಿ






ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ ಹಾರೂಗೇರಿ.

ಜಿಲ್ಲೆ : ಬೆಳಗಾವಿ

ಮಾನ್ಯತೆ ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೧-೨೦೧೨

# ಕನ್ನಡದಲ್ಲಿ ಕೈಲಾಸ ಪ್ರವಾಸ ಕಥನಗಳು

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ನಿಬಂಧ)

: ಸಂಶೋಧಕರು :

ಸುರೇಶ. ಬಿ. ಉಕ್ಕಲಿ

ಸಿ.ಎಲ್.ಇ.ಸಂಸ್ಥೆಯ ಶ್ರೀ. ಬಿ. ಸಿ. ಗಂಗಾಲ ಶಿಕ್ಷಣ ಮಹಾವಿದ್ಯಾಲಯ,

ಚಿಕ್ಕೋಡಿ. ಜಿಲ್ಲೆ: ಬೆಳಗಾವಿ.

BRDHSKS-00574

: ಮಾರ್ಗದರ್ಶಕರು :

ಡಾ. ವ್ಹಿ. ಎಸ್. ಮಾಳಿ

ನಿರ್ದೇಶಕರು

ಶ್ರೀ. ಬಿ. ಆರ್. ದರೂರ.

ಸಂಶೋಧನಾ ಕೇಂದ್ರ ಹಾರೂಗೇರಿ. ಜಿಲ್ಲೆ: ಬೆಳಗಾವಿ.



**ಶ್ರೀ. ಬಿ. ಆರ್. ದರೂರ. ಸಂಶೋಧನಾ ಕೇಂದ್ರ ಹಾರೂಗೇರಿ. ಜಿಲ್ಲೆ:**

**ಬೆಳಗಾವಿ.**

ಮಾನ್ಯತೆ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦೧೧-೧೨

1107

# ಪ್ರಮಾಣ ಪತ್ರ

ಕನ್ನಡದಲ್ಲಿ ಕೈಲಾಸ ಪ್ರವಾಸ ಕಥನಗಳು ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ.ವ್ಹಿ.ಎಸ್.ಮಾಳಿ ಅವರ ಮಾರ್ಗದರ್ಶನದಲ್ಲಿ ನಾನು ಸಿದ್ದಪಡಿಸಿದ್ದೇನೆ. **ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ **ಕನ್ನಡ** ವಿಷಯದಲ್ಲಿ **ಎಂ.ಫಿಲ್**. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಇಡಿಯಾಗಲಿ, ಬಿಡಿಯಾಗಲಿ ನಾನು ಪ್ರಕಟಿಸಿರುವುದಿಲ್ಲವೆಂದೂ ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : ೧೭-೦೭-೨೦೧೩

**ಸುರೇಶ ಬಿ. ಉಕ್ಕಲಿ**

ಸಂಶೋಧನ ವಿದ್ಯಾರ್ಥಿ

ಶ್ರೀ ಬಿ.ಆರ್.ದರೂರ

ಸಂಶೋಧನಾ ಕೇಂದ್ರ, ಹಾರೂಗೇರಿ

# ಧೃಡೀಕರಣ ಪತ್ರ

ಸುರೇಶ ಬಿ. ಉಕ್ಕಲಿ. ಇವರು ಕನ್ನಡದಲ್ಲಿ ಕೈಲಾಸ ಪ್ರವಾಸ ಕಥನಗಳು ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ. **ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ **ಕನ್ನಡ** ವಿಷಯದಲ್ಲಿ **ಎಂ.ಫಿಲ್**. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಇಡಿಯಾಗಲಿ, ಬಿಡಿಯಾಗಲಿ ಎಲ್ಲಿಯೂ ಪ್ರಕಟಿಸಿಲ್ಲವೆಂದೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಧೃಡೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : ೧೭-೦೭-೨೦೧೩

**ಡಾ. ವ್ಹಿ. ಎಸ್. ಮಾಳಿ**

ನಿರ್ದೇಶಕರು,

ಶ್ರೀ ಬಿ.ಆರ್.ದರೂರ

ಸಂಶೋಧನಾ ಕೇಂದ್ರ, ಹಾರೂಗೇರಿ

# ಅರಿಕೆ

ನಾನು ವೃತ್ತಿಯಿಂದ ಕನ್ನಡ ಉಪನ್ಯಾಸಕ. ಚಿಕ್ಕೋಡಿ ಲಿಬರಲ್ ಶಿಕ್ಷಣ ಸಂಸ್ಥೆಯ ಶಿಕ್ಷಣ ಮಹಾವಿದ್ಯಾಲಯದಲ್ಲಿ ಕಳೆದ ಎಂಟು ವರ್ಷಗಳಿಂದ ಕನ್ನಡ ಉಪನ್ಯಾಸಕನೆಂದು ಸೇವೆಸಲ್ಲಿಸುತ್ತಿದ್ದೇನೆ. ಕನ್ನಡದಲ್ಲಿ ಕೈಲಾಸ ಮಾನಸದ ಕುರಿತಾಗಿ ರಚನೆಯಾದ ಕೃತಿಗಳು ನನ್ನಲ್ಲಿ ಆಸಕ್ತಿ ಹುಟ್ಟಿ ಕುತೂಹಲವನ್ನು ಕೆರಳಿಸಿತು. ಅದಕ್ಕೆ ಸ್ಫೂರ್ತಿ ಮತ್ತು ಮಾರ್ಗದರ್ಶನ ನೀಡಿದ ಡಾ. ವ್ಹಿ. ಎಸ್. ಮಾಳಿಯವರಿಗೆ ನಾನು ಚಿರಋಣಿ. ಉನ್ನತ ವ್ಯಾಸಂಗಕ್ಕೆ ಅನುಮತಿ ನೀಡಿದ ಸಿ.ಎಲ್.ಇ.ಸಂಸ್ಥೆಯ ಎಲ್ಲ ಪದಾಧಿಕಾರಿಗಳಿಗೆ ನಾನು ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಸಂಸ್ಥೆಯ ಕಾರ್ಯಾಧ್ಯಕ್ಷರಾದ ಶ್ರೀ ಎಸ್.ಎಸ್.ಚನ್ನವರ, ಕಾರ್ಯದರ್ಶಿಗಳಾದ ಹಾಗೂ ನನ್ನ ನಿಬಂಧ ಕಾರ್ಯಕ್ಕೆ ಸಹಾಯ ಸಹಕಾರ ನೀಡಿ ಆಶೀರ್ವದಿಸಿದ ಶ್ರೀ. ಜಗದೀಶಣ್ಣಾ ಎಮ್. ಕವಟಗಿಮಠ.ರವರಿಗೂ ಸಹ-ಕಾರ್ಯದರ್ಶಿಗಳಾದ ಶ್ರೀ. ಎನ್. ಎಸ್. ವಂಟಮುತ್ತೆ. ಹಾಗೂ ಎಲ್ಲ ನಿರ್ದೇಶಕರಿಗೂ ಸಿ.ಎಲ್.ಇ.ಸಂಸ್ಥೆಯ ಶಿಕ್ಷಣ ಮಹಾವಿದ್ಯಾಲಯದ ನನ್ನ ಎಲ್ಲ ಸಹೊದ್ಯೋಗಳಿಗೂ ನನ್ನ ಈ ಕಾರ್ಯದಲ್ಲಿ ತುಂಬ ಹೃದಯದ ಸಹಾಯ ಸಹಕಾರ ನೀಡಿದ ಸನ್ಮಿತ್ರರಾದ ಶ್ರೀ. ಟಿ. ಬಿ. ಬಡಚಿ. ಕಂಪ್ಯೂಟರ್ ಇನ್‌ಸ್ಟ್ರಕ್ಟರಾದ ಹಾಗೂ ಈ ಎಲ್ಲ ನಿಬಂಧದ ವಿಷಯವನ್ನು ಅಚ್ಚುಕಟ್ಟಾಗಿ ತಾಳ್ಮೆಯಿಂದ ಆಸಕ್ತಿಯಿಂದ ಸಕಾಲದಲ್ಲಿ ಮುದ್ರಿಸಿಕೊಟ್ಟಂತಹ ಶ್ರೀ.ಜಗದೀಶ.ಕರೋಶಿ. ಹಾಗೂ ಎಲ್ಲ ಸಿಬ್ಬಂದಿವರ್ಗಕ್ಕೆ ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಪ್ರತ್ಯಕ್ಷವಾಗಿ ಸಹಾಯಕರಾದ ನನ್ನ ಮಾತೃದೇವತೆಯಾದ ಶ್ರೀಮತಿ. ನೀಲಮ್ಮರವರನ್ನು, ನನ್ನ ಧರ್ಮ ಪತ್ನಿ ಶ್ರೀಮತಿ. ರೇಖಾ ಸುರೇಶ ಉಕ್ಕಲಿ. ಸುಪುತ್ರರಾದ ಬಸವಲಿಂಗ ಹಾಗೂ ಸಿದ್ಧಲಿಂಗ ಹಾಗೂ ಇವರೆಲ್ಲರನ್ನು ನೆನೆಯದೇ ಇರಲಾರೆ.

ವೃಷಭೇಂದ್ರ ಕಾಲೇಜಿನ ಸಿಬ್ಬಂಧಿ ವರ್ಗದವರಿಗೆ ಸಂಶೋಧನಾ ಕೇಂದ್ರದ ರುವಾರಿಯಾದ ಶ್ರೀ. ಬಿ. ಆರ್. ದರೂರ. ಅವರನ್ನು ಸದಾಕಾಲವು ಸ್ಮರಿಸುವೆನು.

ಸ್ಥಳ : ಹಾರೂಗೇರಿ
ದಿನಾಂಕ : ೧೭/೦೭/೨೦೧೩

**ಶ್ರೀ. ಸುರೇಶ. ಬಿ.. ಉಕ್ಕಲಿ**
ಸಿ.ಎಲ್.ಇ.ಸಂಸ್ಥೆಯ
ಶಿಕ್ಷಣ ಮಹಾವಿದ್ಯಾಲಯ ಚಿಕ್ಕೋಡಿ.

# ಪರಿವಿಡಿ

# ಅಧ್ಯಾಯ.೧

## ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

# ಅಧ್ಯಾಯ : ೧

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

‘ನೆರೆ ಕೆನ್ನೆಗೆ ತೆರೆ ಗಲ್ಲಕೆ ಬಂದಡಸದ ಮುನ್ನ,
ಕೀಲುನಿಸಿದ, ಏದುಸಿರಿನ ಚಳಿ ಸೆಕೆಗಳ ಚಿಂತೆ
ಮನವನಲ್ಲಾಡಿಸದ ಮುನ್ನ,
ತಿಗುಣೆ ಸೊಳ್ಳೆ ಗುಂಪು ಗದ್ದಲಗಳ ಭೀತಿ
ರಕ್ತವನಾವರಿಸದ ಮುನ್ನ,
ಮೈಯ ಕೆಚ್ಚು, ಕಾಲ ಕಸುವು, ಬಗೆಯ ಹುಮ್ಮಸ್ಸು
ಒಪ್ಪವಳಿಯದ ಮುನ್ನ,
ಮುಪ್ಪಿನ ಭಾರ ಹೆಗಲೇರದ ಮುನ್ನ,
ಕಿವಿಗೊಡು ಓ ಪ್ರೇಕ್ಷಕ ರಸಿಕನೆ ಪ್ರವಾಸದ ಕರೆಗೆ’ !

(ತೀ.ನಂ.ಶ್ರೀ)

**ಪ್ರವೇಶ :**

“ಒಬ್ಬ ವ್ಯಕ್ತಿ ತನ್ನದಾದಂತಹ ಒಂದು ಸ್ಥಳವನ್ನು ಬಿಟ್ಟು ತನ್ನದಲ್ಲದಂತಹ ಇನ್ನೊಂದು ಸ್ಥಳಕ್ಕೆ ಹೋಗಿ ಆ ಪ್ರದೇಶವನ್ನು ಸುತ್ತಿ ಬಂದು, ಆ ಹೊಸ ಜಾಗದಲ್ಲಿ ಆದಂತಹ ಅನುಭಗಳನ್ನು ಬಣ್ಣಿಸಿದ, ಅಲ್ಲಿ ನೋಡಿದಂತಹ ಪ್ರೇಕ್ಷಣೀಯ ಸ್ಥಳಗಳನ್ನು ವರ್ಣಿಸಿದ, ಅಲ್ಲಿನ ಜನರ ರೀತಿ-ನೀತಿ ಜೀವನ ವಿಧಾನಗಳನ್ನು ವಿವರಿಸಿದ ಸಾಹಿತ್ಯವನ್ನು ‘ಪ್ರವಾಸ ಸಾಹಿತ್ಯ’ವೆಂದು ಕರೆಯಬಹುದು”- ಎನ್ನುತ್ತಾರೆ ಎನ್.ಎಸ್.ತಾರಾನಾಥರು.

'ಅಯ್ಯೋ ಬುದ್ಧಿಗೇಡಿ ಸೋಮಾರಿಯೆ, ಹೋಗು ಪ್ರಪಂಚವನ್ನು ಸುತ್ತು, ಇದಕ್ಕಾಗಿ ನಿನಗೆ ಮತ್ತೊಂದು ಬದುಕು ಬರುವುದಿಲ್ಲ. ಒಂದು ಪಕ್ಷ ಹೆಚ್ಚು ದಿನ ಬದುಕುವಿ ಅನ್ನುವುದಾದರೂ ಈ ಯೌವನ ಮತ್ತೆ ಎಲ್ಲಿಂದ ಬಂದೀತು' ಎನ್ನುತ್ತಾನೆ ಒಬ್ಬ ಹಿಂದಿ ಕವಿ.

ಕನ್ನಡದಲ್ಲಿ ಪ್ರಕಟವಾಗಿರುವ 'ಪ್ರವಾಸ ಸಾಹಿತ್ಯ'ಕ್ಕೆ ಹತ್ತಿರ ನೂರು ವರುಷಗಳು ಸಂದವು.

ಕರ್ಕಿ ವೆಂಕಟರಮಣಶಾಸ್ತ್ರಿಸೂರಿ (೧೮೪೫-೧೮೯೨) ಇವರ 'ದಕ್ಷಿಣ ಯಾತ್ರಾ ಚರಿತ್ರೆ' ಕನ್ನಡದ ಮೊದಲ ಪ್ರವಾಸ ಕಥನವೆಂದು ಅನೇಕರು ತಿಳಿದಿದ್ದಾರೆ. ಶಾಸ್ತ್ರಿಗಳು ಉಡುಪಿಯಿಂದ ಗುರುವಾಯೂರುಗಳ(ಕೇರಳ) ವರೆಗಿನ ಕ್ಷೇತ್ರಗಳನ್ನು ಒಂದೊ ಎರಡೊ ಪದ್ಯಗಳಲ್ಲಿ ವರ್ಣಿಸಿದ್ದಾರೆಂದು, ಮೂವತ್ತೇಳು ಪದ್ಯಗಳ ಅಂಗೈಯಗಲದ ಪುಸ್ತಕವೆಂದೊ ಇದರ ಬಗ್ಗೆ ಶ್ರೀನಿವಾಸ ಹಾವನೂರರು ಬರೆಯುತ್ತಾರೆ.[೧] ಇದರ ನಂತರ ೧೯೨೧ ರಲ್ಲಿ ಪ್ರಕಟವಾಗಿರುವ ಬಿ. ಪುಟ್ಟಯ್ಯನವರ 'ಅಭಿವೃದ್ಧಿ ಸಂದೇಶ' ಉದ್ದೇಶಿತ ಪ್ರವಾಸ ಕಥನವಲ್ಲದಿದ್ದರೂ, ಪ್ರವಾಸದ ಒಳಮೈಯನ್ನೂ ಪಡೆದಿದೆ. "ಇದು ಮೊದಲು ಪತ್ರರೂಪವಾಗಿ 'ಒಕ್ಕಲಿಗ' ಪತ್ರಿಕೆಯಲ್ಲಿ ಪ್ರಕಟವಾಗುತ್ತಿತ್ತು. ಇದನ್ನು ಪತ್ರರೂಪದ ಪ್ರವಾಸಾನುಭವವೆಂದು ಸಡಿಲವಾಗಿ ಕರೆಯಬಹುದೇನೋ", ಎಂದು ಶ್ರೀ.ಎನ್.ಎಸ್. ತಾರಾನಾಥರು ಹೇಳುತ್ತಾರೆ.[೨] ಆದರೆ ಪ್ರಕಟವಾಗಿರುವ ಪುಸ್ತಕ ನೋಡಿದರೆ, ಪತ್ರಗಳ ಮಾದರಿಯಲ್ಲಿಲ್ಲ. ತಮಗಾದ ಅನುಭವವನ್ನೂ ತೆಳುವಾಗಿ ಹೇಳಿದ್ದರೂ 'ಪ್ರವಾಸ'ದ ಛಾಯೆಯಂತೂ ಇದೆ. ಈ ಹಿನ್ನೆಲೆಯಲ್ಲಿ ನೋಡಿದರೆ ಕರ್ಕಿ ವೆಂಕಟರಮಣಶಾಸ್ತ್ರಿಸೂರಿ ಅವರನ್ನು ಲೆಕ್ಕಕ್ಕೆ ಹಿಡಿಯದೆ ಬಿಟ್ಟರೂ ಮುಕ್ಕಾಲು ಶತಮಾನದ ಗಟ್ಟಿ ಮುಟ್ಟಾದ ಅಸ್ತಿತ್ವವಂತೂ ಪ್ರವಾಸ ಸಾಹಿತ್ಯಕ್ಕಿದೆ.

ಕನ್ನಡದ ಮೊದಲ ಘಟ್ಟದ ಅರುಣೋದಯವನ್ನು ಹೊರತು ಪಡಿಸಿದರೂ ಅನಂತರದ ಈ ಶತಮಾನದ ಎರಡು – ಮೂರು ದಶಕಗಳ ವರೆಗೆ 'ಪ್ರವಾಸ ಕೃತಿಗಳು' ಸಾಹಿತ್ಯಿಕವಾಗಿ ಅಂತಹ ಉತ್ತಮ ಮಟ್ಟದ ಪ್ರವಾಸ ಕೃತಿಗಳು ಪ್ರಕಟವಾಗದಿದ್ದರೂ ಮುಂದೆ ಕಾಣಿಸಿಕೊಂಡ ಸಮೃದ್ಧ ಸಾಹಿತ್ಯಕ್ಕೆ ಒಂದು ರೀತಿ ಮಾರ್ಗವಾದವೆಂದು ಹೇಳಬಹುದು. ೧೯೨೭ ರಲ್ಲಿ ಪ್ರಕಟವಾದ ವ್ಹಿ.ಸಿ.ಅವರ 'ಪಂಪಾ ಯಾತ್ರೆ' ಪ್ರವಾಸ ಸಾಹಿತ್ಯದಲ್ಲಿಯೇ ಅತ್ಯುತ್ತಮ ಪ್ರವಾಸ ಕಥನ. ಇದರ ನಂತರ, ಸದ್ಯ ಯಾರ ಕಣ್ಣಿಗೂ ಬೀಳದಿರುವ ಅಪರೂಪದ ಕೃತಿಯೊಂದು ಪ್ರಕಟವಾಗಿದೆ. ಇದು ಅರಸು ಮನೆತನದ ರಾಜಕುಮಾರಿ

---

೧.ಶ್ರೀನಿವಾಸ.ಹಾವನೂರ 'ಹೊಸಗನ್ನಡ ಅರುಣೋದಯ' ಪು.ಸಂ:೨೯೦

೨.ಎನ್.ಎಸ್.ತಾರಾನಾಥ 'ಪ್ರವಾಸ ಸಾಹಿತ್ಯ' ಪು.ಸಂ:೨೭

ಚನ್ನಾಜಮ್ಮಣ್ಣಿಯವರು ೧೯೩೭-೩೮ ರಲ್ಲಿ ಬರೆದ 'ನನ್ನ ಪ್ರಪಂಚ ಸಂಚಾರ' ಇದು ಮಹಿಳೆಯೊಬ್ಬಳ ಮೊದಲ ಪ್ರವಾಸ ಕಥನ. ಇವರ ಬರವಣಿಗೆಯಂತೂ ಸ್ಫುಟವಾಗಿದ್ದು ಅನುಭವಗಳನ್ನು ನೇರವಾಗಿ ಹಾಗೂ ನಿರ್ಭಿಡೆಯಿಂದ ಮಹಿಳಾ ಸಂವೇದನೆಯನ್ನು ಹೇಳುತ್ತಾ ಹೋಗುತ್ತಾರೆ. ರಮ್ಯ ನಿರೂಪಣೆ, ವಸ್ತು ನಿರ್ವಹಣೆಯಲ್ಲಿ ನಮ್ಮ ಆಸಕ್ತಿಯನ್ನು ಕೆರಳಿಸುತ್ತದೆ.

ಕನ್ನಡದ ಪ್ರವಾಸ ಸಾಹಿತ್ಯ ಕೃತಿಗಳ ಚರಿತ್ರೆಯನ್ನು ಸ್ಥೂಲವಾಗಿ ಹೀಗೆ ವಿಂಗಡಿಸಬಹುದು : ೧೯೨೮ರ ಆರಂಭದಿಂದ ವಿ.ಸೀ. ಅವರ ಕೃತಿ ಪ್ರಕಟವಾಗುವವರೆಗೂ ಮೊದಲ ಘಟ್ಟವಾದರೆ; ವಿ.ಸಿ. ಅವರ ನಂತರ ಸುಮಾರು ೧೯೫೦ ರವರೆಗೂ ಎರಡನೆಯ ಘಟ್ಟ ; ೧೯೫೦ರ ನಂತರದ್ದು ಮೂರನೆಯ ಘಟ್ಟ. ಮೊದಲ ಘಟ್ಟದಲ್ಲಿ ಕರ್ಕಿ ವೆಂಕಟರಮಣಶಾಸ್ತ್ರಿಸೂರಿ, ಜೆ.ಕೃಷ್ಣಮೂರ್ತಿ, ಶ್ರೀ ಕರವೀರಪ್ಪ, ಅಂದಾನೆಪ್ಪ ಕುಲಕರ್ಣಿ, ಇಂಥವರು ಮೊದಲನೆಯ ಘಟ್ಟದ ಮುಖ್ಯ ಪ್ರತಿನಿಧಿಗಳು. ಎರಡನೇ ಘಟ್ಟವು ಮೊದಲ ಘಟ್ಟದ ಸ್ವಲ್ಪ ಹಿಂದೆ ಸೇರಿದರೂ ವಿ.ಸೀ, ಶ್ರೀರಂಗ, ನೆಗಳೂರು, ಹೆಚ್.ಎಸ್.ಪಾಟೀಲ (ಇವರು ಮೂವರು ಕೂಡಿ ಮಾಡಿದ ಯಾತ್ರೆ) ದ.ಕೃ.ಭಾರದ್ವಾಜ, ಸಿದ್ದವನಹಳ್ಳಿ ಕೃಷ್ಣಶರ್ಮ, ಕೃಷ್ಣನಾರಾಯಣ ಗೋಸಾವಿ, ವಿ.ಕೃ.ಗೋಕಾಕ, ಮೊದಲಾದವರು ಎರಡನೆಯ ಘಟ್ಟದ ಪ್ರತಿನಿಧಿಗಳು, ಮೂರನೆಯ ಘಟ್ಟದಲ್ಲಿ ಶಿವರಾಮ ಕಾರಂತ, ಎ.ಎನ್.ಮೂರ್ತಿರಾವ್, ಜಿ.ಎಸ್.ಶಿವರುದ್ರಪ್ಪ, ಹೊ.ಶ್ರೀನಿವಾಸಯ್ಯ, ಕು.ಶಿ.ಹರಿದಾಸಭಟ್ಟ ಇವರು ಮುಖ್ಯವಾಗಿ ಬರುತ್ತಾರೆ.

ಈ ಹಿನ್ನೆಲೆಯಲ್ಲಿ ಪ್ರವಾಸ ಸಾಹಿತ್ಯದ ಸ್ವರೂಪ, ಲಕ್ಷಣಗಳನ್ನು ಕುರಿತು ಸಾಕಷ್ಟು ಚರ್ಚೆಯಾಗಿಲ್ಲವಾದರೂ-ಆಗಿರುವ ಚರ್ಚೆ ತಾತ್ವಿಕವಾಗಿ ಗಟ್ಟಿಮುಟ್ಟಾಗಿವೆ. ಸಾ.ಶಿ.ಮರುಳಯ್ಯ, ವರದರಾಜ ಹುಯಿಲಗೋಳ, ಬಿ.ಎ.ವಿವೇಕರೈ, ಎಸ್.ವಿದ್ಯಾಶಂಕರ್ ಮತ್ತು ಎನ್.ಎಸ್.ತಾರಾನಾಥ ಇವರುಗಳು ಪ್ರವಾಸ ಸಾಹಿತ್ಯದ ಸ್ವರೂಪ-ಲಕ್ಷಣಗಳ ಬಗ್ಗೆ ಬರೆದಿದ್ದಾರೆ. ಮೊದ ಮೊದಲು ಪ್ರವಾಸವೆಂದರೆ ಧಾರ್ಮಿಕ ಕ್ಷೇತ್ರಗಳಿಗೆ ಹೋಗುವ ಪ್ರವಾಸವನ್ನು ತೀರ್ಥಯಾತ್ರೆ ಎನ್ನುವಷ್ಟರಮಟ್ಟಿಗೆ ಸೀಮಿತವಾಗಿತ್ತು, ನಂತರ ಆ ಭಾವ ತೊಲಗಿದೆ. ಪ್ರವಾಸ ನಮ್ಮ ಅನುಭವದ ಕೋಶವನ್ನು ಹಿಗ್ಗಿಸಲು ಬಹು ಮುಖ್ಯವಾದ ಸಾಧನವಾಗಿದೆ. ಅದಕ್ಕಾಗಿಯೇ ಇರುವಂತಹ ಗಾದೆಯನ್ನು "ದೇಶ ಸುತ್ತು, ಇಲ್ಲವೆ ಕೋಶ ಓದು" ಎನ್ನುವ ಮಾತು ಒಪ್ಪುವಂತಹದ್ದು. ನಾವು ಮಾಡುವ ಸಂಚಾರ ನಮ್ಮ ಅನುಭವಕ್ಕೊಂದು ವ್ಯಾಪ್ತಿಯನ್ನೂ, ಅರ್ಥವಂತಿಕೆಯನ್ನೂ, ಭಾವಗಮ್ಯವಾದ ಸುಖವನ್ನೂ ನೀಡುತ್ತದೆ. ದೇಹ ಮತ್ತು ಮನಸ್ಸು ನಾನಾದೇಶಗಳ ಜನರ, ಮನಸ್ಸು, ಜೀವನ ಶೈಲಿ

ಪರಿಸರದಲ್ಲಿ ನದಿ – ಕಾನನಗಳು, ಭೂಮಿ–ಭಾನುಗಳ, ಇತಿಹಾಸ, ಕಲೆ, ಸಾಹಿತ್ಯ, ಸಂಸ್ಕೃತಿಗಳ ಜೊತೆಗೆ ಅರ್ಥಪೂರ್ಣವಾದ ಸಂಬಂಧ ಬೆಳೆಸಿದಾಗಲೇ ಅವುಗಳಿಗೆ ಒಂದು ಬಗೆಯ ಕಳೆ ತೃಪ್ತಿ, ಗೆಲುವು, ಲವಲವಿಕೆ ಪ್ರಾಪ್ತವಾಗುವುದು. ಎಂಬ ಮಾತಿನೊಡನೆ "ನಮ್ಮಲ್ಲಿ ನಿಸರ್ಗ ಸೌಂದರ್ಯವನ್ನು ಸವಿಯುವುದಕ್ಕಾಗಿ ಪ್ರವಾಸ ಕೈಗೊಳ್ಳುವ ಸಂದರ್ಭ ಮತ್ತು ಮನೋವೃತ್ತಿ ವಿರಳ" ಎಂಬುದನ್ನು ಹೋಲಿಸಿ ನೋಡಬಹುದು.

## ೧.೧ ಅಧ್ಯಯನದ ಉದ್ದೇಶ :

ಪ್ರವಾಸ ಎನ್ನುವ ಒಂದು ಕಲ್ಪನೆ (Concept) ಇದು ಭಾರತೀಯ ಮನೋಧರ್ಮಕ್ಕೆ ಆಧುನಿಕ ಅರ್ಥದಲ್ಲಿ ಹೊಂದುವಂಥದಲ್ಲ. ಏಕೆಂದರೆ, ಸುಮ್ಮನೆ ಸಂತೋಷಕ್ಕೋಸ್ಕರ ಸಂಚಾರ ಮಾಡುವುದು ಭಾರತೀಯ ಮನಸ್ಸಿಗೆ ಒಗ್ಗುವಂಥ ವಿಷಯವಲ್ಲ. ಅದೇನಿದ್ದರೂ ತೀರ್ಥಯಾತ್ರೆಯನ್ನು ಇಷ್ಟಪಡುವಂಥ ಮನಸ್ಸು, ಅದು ನಮ್ಮಲ್ಲಿ ಶುದ್ಧ ಪ್ರವಾಸ ಇಲ್ಲವೇ ಇಲ್ಲ. ಏನಿದ್ದರೂ ಪುಣ್ಯಕ್ಷೇತ್ರಗಳನ್ನು ಹುಡುಕಿಕೊಂಡು ಹೋಗಿ, ನದಿಗಳಲ್ಲಿ ಸ್ನಾನಮಾಡಿ, ಬೆಟ್ಟಗಳನ್ನು ಹತ್ತಿ, ಅಲ್ಲಿ ದೇವರ ದರ್ಶನ ಮಾಡಿಕೊಂಡು ಪಾಪ ಪರಿಹಾರ ಮತ್ತು ಪುಣ್ಯ ಸಂಪಾದನೆ ಇತ್ಯಾದಿಗಳಿಗೆ ಬದ್ಧವಾದ ಒಂದು ಸಂಚಾರವಾಗಿರುತ್ತದೆ.

ಒಂದು ಕಾಲಕ್ಕೆ ನಮ್ಮ ದೇಶದಲ್ಲಿ ತೀರ್ಥಯಾತ್ರೆಯ ಹೊರತಾಗಿ ಹೊರದೇಶಕ್ಕೆ ಹೋಗುವ ಪದ್ದತಿಯೇ ಇರಲಿಲ್ಲ. ವಿದೇಶಕ್ಕೆ ಹೋಗುವುದೇ ಒಂದು ಮಹಾಪರಾಧ. ಶಾಸ್ತ್ರಗಳ ಪ್ರಕಾರ ಯಾರಾದರೂ ಪರದೇಶಕ್ಕೆ ಹೋದರೆ ಸಮುದ್ರವನ್ನು ದಾಟಿದ ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗುತ್ತಿತ್ತು. ಇಂಥಹ ಉದಾಹರಣೆಗಳು ಬೇಕಾದಷ್ಟಿವೆ.

ಹೀಗೆ ವಿದೇಶಕ್ಕೆ ಹೋಗುವುದು ಒಂದು ಅಪರಾಧವೇ ಆಗಿತ್ತು. ಅದಕ್ಕಾಗಿ ಭಾರತೀಯರು ಯಾವತ್ತು ಪ್ರವಾಸಕ್ಕೆ ಹೋದವರೇ ಅಲ್ಲ. ಇಡೀ ನಮ್ಮ ಚರಿತ್ರೆಯಲ್ಲೇ ನಿರ್ಣಯಿಸಿರುವ ಅಂಶ ಅದು. ಒಂದೇ ಸ್ಥಳದಲ್ಲಿ ಇರುವ ಜಾಯಮಾನ ಭಾರತೀಯರದು. ವಿದೇಶಿಯರೆಲ್ಲ ಬಂದು ಕೊಳ್ಳೆ ಹೊಡೆದರೇ ಹೊರತಾಗಿ ಭಾರತೀಯ ಜನ ಇದನ್ನು ದಾಟಿ ಆ ಕಡೆ ಬೇರೆ ಬೇರೆ ದೇಶಗಳನ್ನು ಗೆಲ್ಲಬೇಕು ಎನ್ನುವ ಮಹತ್ವಾಕಾಂಕ್ಷೆ ನಮ್ಮವರಿಗೆ ಬರಲೇ ಇಲ್ಲ. ಅದಕ್ಕೂ ಬಹುಶಃ ಈ ಮನೋಭಾವವೇ ಕಾರಣ ಎಂದು ಕಾಣುತ್ತದೆ. ಹೀಗೆ ಪ್ರವಾಸ ವಿಚಾರದಲ್ಲಿ ಒಂದು ರೀತಿಯಲ್ಲಿ ಪುಣ್ಯ ಸಂಪಾದನೆ, ಆಧ್ಯಾತ್ಮಿಕವಾದ, ಧಾರ್ಮಿಕವಾದ ಭಾವನೆಗಳಿದ್ದುವೇ ಹೊರತಾಗಿ ಪ್ರವಾಸ ಮಾಡುವುದರಿಂದ ಲಾಭ ಉಂಟು ಎನ್ನುವ ಕಲ್ಪನೆ ಬಹುಶಃ ನಮ್ಮಲ್ಲಿ ಬೆಳೆದದ್ದು ಇತ್ತೀಚಿಗೆ. ರೋಜರ್ ಬೇಕನ್ ಎಂಬ ಇಂಗ್ಲೀಷ ಪ್ರಬಂಧಕಾರ ಒಂದು ಮಾತು ಹೇಳುತ್ತಾನೆ. "ಪ್ರವಾಸ ಎನ್ನುವುದು ಚಿಕ್ಕಂದಿನಲ್ಲಿ ಶಿಕ್ಷಣದ ಒಂದು ಭಾಗ; ದೊಡ್ಡವರಲ್ಲಿ ಅನುಭವದ ಒಂದು ಭಾಗ", ಚಿಕ್ಕ ಮಕ್ಕಳಿಗೆ ಪ್ರವಾಸ ಮಾಡುವ ಒಂದು

ಅನುಕೂಲವನ್ನು ಇತ್ತೀಚಿನ ನಮ್ಮ ಶಿಕ್ಷಣ ಕ್ರಮದಲ್ಲೇ ಅಳವಡಿಸಿದ್ದೇವೆ. ಹೀಗೆ ಪ್ರವಾಸವೆನ್ನುವುದು ಶಿಕ್ಷಣದ ಒಂದು ಭಾಗವಾಗಿದೆ, ಎಳೆಯಂದಿನಲ್ಲಿ ಬೆಳೆದ ಮೇಲೆ ಅನುಭವದ ಒಂದು ಭಾಗವಾಗುತ್ತದೆ.

ಕನ್ನಡದಲ್ಲಿ ಪ್ರವಾಸ ಕಥನಗಳು ಪ್ರಸ್ತುತ ಒಂದು ಸಾಹಿತ್ಯಿಕ ಪ್ರಕಾರವಾಗಿ, ಸಾರಸ್ವತಕ್ಕೆ ಸೇರ್ಪಡೆಯಾಗಿ ಬೆಳೆಯುತ್ತಿವೆ. ಇದು ಬಹಳ ಸಂತೋಷದ ವಿಚಾರ, ಕನ್ನಡ ಸಾಹಿತ್ಯಕ್ಕೆ ಈ ಪ್ರವಾಸ ಸಾಹಿತ್ಯ ಒಂದು ಹೊಸ ಆಯಾಮವನ್ನು ನೀಡಿದೆ. ಕನ್ನಡ ಜನಕ್ಕೆ ಬೇರೆ ಬೇರೆ ದೇಶದ ಅನುಭವಗಳನ್ನು, ಮೌಲ್ಯಗಳನ್ನು, ನಾಗರಿಕತೆ-ಸಂಸ್ಕೃತಿಗಳನ್ನು ಪರಿಚಯ ಮಾಡಿಕೊಡುವುದು, ಈ ಹಿನ್ನೆಲೆಯಲ್ಲಿ ಕನ್ನಡ ಪ್ರವಾಸ ಕಥನಗಳ ಒಂದು ಭಾಗವಾಗಿ ಬೆಳೆಯುತ್ತಿರುವ ಕೈಲಾಸ ಪ್ರವಾಸ ಕಥನಗಳ ಸ್ವರೂಪ, ಉದ್ದೇಶ, ಪರಿಣಾಮಗಳನ್ನು ಕಂಡುಕೊಳ್ಳುವ ಉದ್ದೇಶ ಈ ಅಧ್ಯಯನದು.

## ೧.೨ ಪ್ರವಾಸ ಸಾಹಿತ್ಯದ ಸ್ವರೂಪ :

ಪ್ರವಾಸ ಸಾಹಿತ್ಯದ ಒಳಮೈ ಲಕ್ಷಣಗಳನ್ನು ನಾಲ್ಕು ನೆಲೆಗಳಲ್ಲಿ ಹೀಗೆ ಗುರುತಿಸುತ್ತೇವೆ.

೧) ಸಂಶೋಧನಾ ಹಿನ್ನೆಲೆಯ ಪ್ರವಾಸ ಕಥನಗಳು

೨) ಸ್ವಯಂ ಪ್ರೇರಣೆಯಿಂದ ಬಂದ ಪ್ರವಾಸ ಕಥನಗಳು

೩) ಸರ್ಕಾರಿ/ಸ್ವಯಂ ಸೇವಾ ಸಂಸ್ಥೆಗಳಿಂದ ಪ್ರಕಟಿಸಿದ ಪ್ರವಾಸ ಕಥನಗಳು

೪) ಭಕ್ತಿ ಅಥವಾ ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ಬಂದ ಪ್ರವಾಸ ಕಥನಗಳು

ಈ ರೀತಿಯಾಗಿ ಅಧ್ಯಯನದ ಅನುಕೂಲಕ್ಕೋಸ್ಕರ ನಾವು ಸೃಷ್ಟಿಸಿಕೊಂಡ ವಿಭಾಗಗಳು. ಪ್ರವಾಸ ಸಾಹಿತ್ಯದಲ್ಲಿ ಈ ಕೆಳಗಿನಂತೆ ಪ್ರವಾಸ ಕಥನಗಳು ಪ್ರಕಟವಾಗಿರುವುದನ್ನು ಗಮನಿಸುತ್ತೇವೆ.

೧) ಅನುಭವ ನಿರೂಪಣ

೨) ಕಥನಾತ್ಮಕ ಶೈಲಿ

೩) ಆತ್ಮಕಥನದ ನಿವೇದನೆ

೪) ಪ್ರವಾಸ ಕಥನದ ವಸ್ತುದ್ರವ್ಯ

ಕನ್ನಡದಲ್ಲಿ ಬಂದಿರುವ ಎಲ್ಲ ಪ್ರವಾಸ ಕೃತಿಗಳೂ ಗದ್ಯ ರೂಪದಲ್ಲಿವೆ. ಅವು ಕೇವಲ ಶುಷ್ಕಗದ್ಯವಾಗದೆ; ಕಥನಾತ್ಮಕ ನೆಲೆಯನ್ನು ಪಡೆದಿವೆ. ವ್ಹಿ.ಸಿ ಅವರ 'ಪಂಪಾ ಯಾತ್ರೆ'ಯನ್ನು ಇಲ್ಲಿ ಸ್ಮರಿಸಿಕೊಂಡಾಗ ಇವರು ಪ್ರವಾಸದಲ್ಲಿ ತಮಗಾದ ಅನುಭವವನ್ನು ಆತ್ಮಕಥನದ ನೆಲೆಯಲ್ಲಿ ನಿವೇದಿಸಿಕೊಳ್ಳುವುದು ಕಂಡು ಬರುತ್ತದೆ.

ಇನ್ನು ನಿಜವಾದ ಸಮಸ್ಯೆ ಬಂದಿರುವುದು ಪ್ರವಾಸ ಸಾಹಿತ್ಯವನ್ನು ಹೇಗೆ ವಿಂಗಡಿಸುವುದೆಂಬುದಕ್ಕೆ, ವರದರಾಜ ಹುಯಿಲಗೋಳರು ರೂಪವನ್ನು (Form) ಆಧರಿಸಿ ಅಧ್ಯಯನದ ಅನುಕೂಲಕ್ಕಾಗಿ ಪ್ರವಾಸ ಕಥನಗಳನ್ನು ಹೀಗೆ ವಿಂಗಡಿಸಿದ್ದಾರೆ.[೩]

೧) ಪತ್ರರೂಪದ ಪ್ರವಾಸ ಸಾಹಿತ್ಯ

೨) ದಿನಚರಿ ಪ್ರವಾಸ ಸಾಹಿತ್ಯ

೩) ಕಥನರೂಪದ ಪ್ರವಾಸ ಸಾಹಿತ್ಯ

ಸಾ.ಶಿ.ಮರುಳಯ್ಯ ಅವರು ಇವುಗಳನ್ನು ಇನ್ನೊಂದು ತೆರನಾಗಿ ವಿಂಗಡಿಸಿದ್ದಾರೆ.[೪] ಇದು ಮುಖ್ಯವಾಗಿ ಪ್ರವಾಸಿ ಯಾವ ಉದ್ದೇಶವನ್ನು ಇಟ್ಟುಕೊಂಡು ಪ್ರವಾಸ ಮಾಡಿ ಕೃತಿ ರಚಿಸಿದ್ದಾರೆ – ಎಂಬುದನ್ನೇ ಮುಖ್ಯವಾಗಿ ಆಧರಿಸಿದೆ ಅವರ ವರ್ಗೀಕರಣ ಇಂತಿದೆ –

೧) ತೀರ್ಥಯಾತ್ರಾ ಪ್ರವಾಸ ಸಾಹಿತ್ಯ

೨) ಸಾಂಸ್ಕೃತಿಕ ಪ್ರವಾಸ ಸಾಹಿತ್ಯ

೩) ಶೈಕ್ಷಣಿಕ ಪ್ರವಾಸ ಸಾಹಿತ್ಯ

೪) ವ್ಯವಹಾರಿಕ ಪ್ರವಾಸ ಸಾಹಿತ್ಯ

೫) ಪ್ರವಾಸ ಪ್ರೇಮಿ ಪ್ರವಾಸ ಸಾಹಿತ್ಯ

ಇನ್ನು ಈ ಕ್ಷೇತ್ರದಲ್ಲಿ ವಿಶೇಷ ವ್ಯಾಸಂಗ ಮಾಡಿರುವ ಎಸ್.ವಿದ್ಯಾಶಂಕರ ಅವರು ಅಭ್ಯಾಸದ ದೃಷ್ಟಿಯಿಂದ ಈ ಕೆಳಕಂಡಂತೆ ವಿವರಿಸಿದ್ದಾರೆ :

೧) ವಿಶ್ವಪರ್ಯಟನ ಸಾಹಿತ್ಯ

೨) ಬಿಡಿ ಬಿಡಿ ದೇಶಗಳ ಪ್ರವಾಸ ಸಾಹಿತ್ಯ

೩) ಭರತಖಂಡ ಪ್ರವಾಸ ಸಾಹಿತ್ಯ

೪) ತೀರ್ಥಯಾತ್ರಾ ಸಾಹಿತ್ಯ

೫) ಕರ್ನಾಟಕ ಪ್ರವಾಸ ಸಾಹಿತ್ಯ

೬) ಅನುವಾದ ಪ್ರವಾಸ ಸಾಹಿತ್ಯ

ಎನ್.ಎಸ್.ತಾರಾನಾಥರು ಪ್ರವಾಸ ಕೃತಿಗಳ ಬಗೆಗೆ ನಡೆದಿರುವ ಚರ್ಚೆಯ ಹಿನ್ನೆಲೆ

---

೩. ವರದರಾಜ ಹುಯಿಲಗೋಳ 'ಪ್ರವಾಸ ಸಾಹಿತ್ಯ' ಪು.ಸಂ–೨೪೯

೪.ಸಾ.ಶಿ.ಮರುಳಯ್ಯ 'ಪ್ರವಾಸ ಸಾಹಿತ್ಯ' ಪು.ಸಂ–೭

ಹಾಗೂ ಕನ್ನಡದಲ್ಲಿ ಪ್ರಕಟವಾಗಿರುವ ಕೃತಿಗಳನ್ನು ಅನುಲಕ್ಷಿಸಿ ಈ ಬಗೆಯಾಗಿ ವಿಂಗಡಿಸುತ್ತಾರೆ.[೫] ಅವರು ಅವುಗಳ ಸ್ವರೂಪವನ್ನು ಗಮನಿಸಿ ಹೀಗೆ ವಿಂಗಡಿಸಿದ್ದಾರೆ.

೧) ಮಾಹಿತಿ ಕಥನ ಪ್ರವಾಸ ಸಾಹಿತ್ಯ (Factual Account Travelogues)

೨) ತೋರು ವಾಸ್ತವತೆಯ ಭ್ರಾಮಕ ಪ್ರವಾಸ ಸಾಹಿತ್ಯ. (Fantasy Purporting to be fact travelogues)

ಇವುಗಳಲ್ಲಿ ಅಧ್ಯಯನದ ದೃಷ್ಟಿಯಿಂದ ಎಸ್.ವಿದ್ಯಾಶಂಕರ ಅವರು ಪ್ರವಾಸ ಸಾಹಿತ್ಯವನ್ನು ವಿಂಗಡಿಸುವ ಬಗೆಯನ್ನು ಸದ್ಯಕ್ಕೆ ಒಪ್ಪಬಹುದೆಂದು ತೋರುತ್ತದೆ. ಪ್ರವಾಸ ಸಾಹಿತ್ಯದ ಲಕ್ಷಣವನ್ನು ಬೆರಳು ತೋರಿಸಿ ಹೇಳುವುದಕ್ಕಾಗದಿದ್ದರೂ ವಿದ್ಯಾಶಂಕರ ಅವರು ಹೇಳುವ ಮಾತನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ. ಪ್ರವಾಸ ಕಥನವೆನ್ನುವುದು ವ್ಯಕ್ತಿನಿಷ್ಠ ಸಾಹಿತ್ಯ, ಅದು ಭಾವಗೀತೆಯಂತೆ ಭಾವನಿಷ್ಠ ಹಾಗೂ ಲಲಿತ ಪ್ರಬಂಧದಂತೆ ವ್ಯಕ್ತಿನಿಷ್ಠ. ಎಲ್ಲ ಸಾಹಿತ್ಯ ಪ್ರಕಾರಗಳ ಮೂಲ ಸರಕು ಅನುಭವವಾಗಿರುವಂತೆ ಪ್ರವಾಸಕ್ಕೂ ಅನುಭವವೇ ಮುಖ್ಯವಾಗಿದೆ, ಪ್ರವಾಸಿಯ ಗ್ರಾಹ್ಯಶಕ್ತಿಯನ್ನವಲಂಬಿಸಿ ಅವನ ಅನುಭವ ಗಟ್ಟಿ ಇಲ್ಲವೆ ಟೊಳ್ಳಾಗಿರುತ್ತದೆ. 'ಗ್ರಹಿಕೆ' ಗುಣವಿಲ್ಲದ ಪ್ರವಾಸಿಯು ರೆಕ್ಕೆಗಳಿಲ್ಲದ ಪಕ್ಷಿಯಂತೆ ಪ್ರವಾಸಿಯು ಎಷ್ಟರ ಮಟ್ಟಿಗೆ ಅವನ ಕಣ್ಣು ಮನಗಳು ಭೂಮ್ಯವ್ಯೋಮ ವಿಹಾರಿಯಾಗುತ್ತದೋ ಅಷ್ಟರ ಮಟ್ಟಿಗೆ ಅವನ ಅಂತರಂಗ ಕಲಿಯುತ್ತದೆ ಹಾಗೂ ನಲಿಯುತ್ತದೆ. ಅವನ ಸಂವೇದನಾಶೀಲತೆಯನ್ನಾಧರಿಸಿ ಅವನ ಅನುಭವ ದ್ರವ್ಯ ಸಲ್ಲುತ್ತದೆ, ಸಲ್ಲದಿರುತ್ತದೆ. ಇಲ್ಲಿ ಅವನ ಸಮೃದ್ಧ ಅನುಭವ ರಾಶಿಯನ್ನು ಘನೀಕರಿಸುವ ಭಾಷೆ ಪ್ರಧಾನವಾಗಿರುತ್ತದೆ. ಈ ಪ್ರವಾಸ ಸಾಹಿತ್ಯದ ಲಕ್ಷಣವನ್ನು ಒಟ್ಟು ಸಂಗ್ರಹವಾಗಿ ಈ ಮಾತು ಹಿಡಿದಿಡುತ್ತದೆ.

## ೧.೩. ಅಧ್ಯಯನದ ವ್ಯಾಪ್ತಿ :

ಕನ್ನಡ ಸಾಹಿತ್ಯವಿಂದು ಜನಜೀವನದ ಆಗುಹೋಗುಗಳ ಕಥನಕ್ಕೆ ಪ್ರತಿಕ್ರಿಯೆಗೆ ಮಾತ್ರ ಸೀಮಿತವಾಗಿರದೆ, ಒಂದು ಚಾರಿತ್ರಿಕ ಬದಲಾವಣೆಯಲ್ಲಿ ಮಹತ್ವದ ಪಾತ್ರ ವಹಿಸುವ ಶಕ್ತಿಯಾಗಿ ಬೆಳೆದು ನಿಂತಿದೆ. ಜಾಗತೀಕರಣವನ್ನು ತನ್ನ ಪರಂಪರೆ ಅಂತಃಸತ್ವದಿಂದ ಗರ್ಭೀಕರಿಸಿಕೊಂಡು, ದೇಸಿಯವಾಗಿ ಝಳಪಿಸುತ್ತ ಸವಾಲುಗಳಿಗೆ ಎದೆಗೊಡುತ್ತಿರುವುದು ವಿನೂತನವಾಗಿದೆ; ಅನನ್ಯವಾಗಿದೆ. ಇದಕ್ಕೆ ಕಾರಣವೇನೆಂದರೆ ಅನೇಕ ಅನುಭವ, ವೃತ್ತಿ, ಆಸಕ್ತಿ, ಪ್ರವೃತ್ತಿಗಳ ಹಿನ್ನೆಲೆಯ ಬರಹಗಾರರು ಸಾಹಿತ್ಯ ಕ್ಷೇತ್ರದಲ್ಲಿ ಹೊಸಹೊಸ ಪ್ರಯೋಗ

೫. ಎನ್.ಎಸ್.ತಾರಾನಾಥ ಪೂರ್ವೋಕ್ತ ಪು.ಸಂ-೧೫

ಮಾಡುತ್ತಿರುವರು. ಶೈಕ್ಷಣಿಕ ವಲಯದ ಆಚೆಗಿನ ಹತ್ತಾರು ವೃತ್ತಿ, ವ್ಯವಸಾಯಗಳ ಪ್ರತಿಭಾವಂತರ ಬರವಣಿಗೆಯ ಕಾರಣದಿಂದ ಆಧುನಿಕ ಸಾಹಿತ್ಯ ಅದರಲ್ಲಿಯೂ ದಲಿತ, ಬಂಡಾಯೋತ್ತರ ಸಾಹಿತ್ಯ ವಿವಿಧ ರೂಪ ವಿನ್ಯಾಸಗಳಲ್ಲಿ ಬೆಳೆಯುತ್ತಿದೆ. ವಿಚಿತ್ರ ಎಂದರೆ 'ಮಹಾಕಾವ್ಯ ಮತ್ತು ಲಲಿತ ಪ್ರಬಂಧಗಳ ಕಾಲವಿನ್ನು ಮುಗಿದು ಹೋಯಿತು' ಎಂಬ ಹೇಳಿಕೆಗಳು ಬಿದ್ದು ಹೋದವು. ಇಪ್ಪತ್ತೊಂದನೆಯ ಶತಮಾನದಲ್ಲಿ ಒಂದಾದ ನಂತರ ಒಂದರಂತೆ ಮಹಾಕಾವ್ಯಗಳು ಬರುತ್ತಿವೆ. ಅದರಂತೆ ನಿಧಾನ ದಿನಗಳ, ವಿಶ್ರಾಂತಿ ದಿನಗಳ ಸಾಹಿತ್ಯವೆಂಬ ವಿನೋದ ವಿಡಂಬನೆಗೆ ಗುರಿಯಾದ ಲಲಿತ ಪ್ರಬಂಧಗಳೂ ಇಂದು ಹೊಸ ಜೀವ ಪಡೆದಂತೆ ಹೊರಬರುತ್ತಿವೆ. ಇತ್ತಿತ್ತಲಾಗಿ ಪ್ರವಾಸಕಥನಗಳು ಪ್ರವಾಹ ರೀತಿಯಲ್ಲಿ ಬರುತ್ತಿವೆ.

ಈ ಅಧ್ಯಯನದಲ್ಲಿ ಕೈಲಾಸ ಪ್ರವಾಸದ ಈ ಕೆಳಗಿನ ೫ ಪ್ರಮುಖ ಪ್ರವಾಸ ಕಥನಗಳನ್ನು ಮಾತ್ರ ಪ್ರಾತಿನಿಧಿಕವಾಗಿ ಅವಲೋಕಿಸಲಾಗಿದೆ.

೧. ಕೈಲಾಸಾಧಿಪತಿಯ ಮನೆಯಂಗಳದಲ್ಲಿ

೨. ಕೈಲಾಸ ಮಾನಸ

೩. ಸದ್ದು! ದೇವರು ಸ್ನಾನ ಮಾಡುತ್ತಿದ್ದಾನೆ

೪. ಹಿಮಾಲಯ ಯಾತ್ರೆ

೫. ಹಿಮಾಲಯದ ಮಡಿಲಲ್ಲಿ

## ೧.೪ ವೈಧಾನಿಕತೆ :

ಇದು ವಿಶ್ಲೇಷಣಾತ್ಮಕ ಅಧ್ಯಯನ. ಅನುಭವಗಳು ಭಿನ್ನವಾದಂತೆ ಕಥನ ಸ್ವರೂಪವೂ ಭಿನ್ನವಾಗುತ್ತದೆ. ಪ್ರವಾಸ ಕಥನವೆಂದರೆ ಪ್ರವಾಸ ಸ್ಥಳದ ಮಾಹಿತಿಕೋಶವೂ ಅಲ್ಲ; ಪ್ರವಾಸ ವಿವರಗಳನ್ನು ಅಕ್ಷರಶಃ ದಾಖಲಿಸುವ ದಿನಚರಿಯೂ ಅಲ್ಲ. ತನ್ನ ಪ್ರವಾಸದ ಅನುಭವಗಳನ್ನು ಸಶಕ್ತವಾಗಿ ಕಟ್ಟಿಕೊಡುವುದರ ಮೂಲಕ ಅದನ್ನು ಸಾರ್ವತ್ರಿಕ ಹಾಗೂ ಸಾರ್ವಕಾಲಿಕಗೊಳಿಸುವುದೇ ನಿಜವಾದ ಪ್ರವಾಸ ಕಥನ. ಈ ಹಿನ್ನೆಲೆಯಲ್ಲಿ ಐದು ಕೈಲಾಸ ಪ್ರವಾಸ ಕಥನಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ.

# ಅಧ್ಯಾಯ.೨

## ಕೈಲಾಸ ಕಥನಗಳ ಸ್ವರೂಪ

## ಅಧ್ಯಾಯ – ೨

## ಕೈಲಾಸ ಕಥನಗಳ ಸ್ವರೂಪ

ಕನ್ನಡಿಗರಲ್ಲಿ ಹಲವಾರು ಜನ ಕೈಲಾಸ ಮಾನಸ ಯಾತ್ರೆಯನ್ನು ಕೈಗೊಂಡಿದ್ದಾರೆ. ಅವರಲ್ಲಿ ಕೆಲವರು ನೋಡಿ ಸಂತಸಪಟ್ಟು ಆ ಸಂತೋಷವನ್ನು ಬೇರೆಯವರಿಗೆ ತಣಿಸಲು ತಮ್ಮ ಅನುಭವಗಳನ್ನು ಬರೆದಿಟ್ಟಿದ್ದಾರೆ. ಓದುಗನಿಗೆ ಕೈಲಾಸ ಮಾನಸದ ಪರಿಸರ, ಹವಾಮಾನ, ದೇವಾಲಯಗಳು, ನದಿ, ಬೆಟ್ಟ, ಸರೋವರ, ಹಿಮಪಾತ ಮುಂತಾದ ದೃಶ್ಯಗಳ ಸೌಂದರ್ಯಾನುಭವಗಳನ್ನು ವಿವಿಧ ಲೇಖಕರು ವಿಸ್ತೃತವಾಗಿ ವಿವರಿಸಿರುವರು. ಕೈಲಾಸ ಮಾನಸದ ಎಲ್ಲ ಸೌಂದರ್ಯವನ್ನು ಬರವಣಿಗೆಯ ಮೂಲಕ ಸೆರೆಹಿಡಿದಿದ್ದು ವಿಶೇಷ. ಇಲ್ಲಿ ಗಮನಿಸಬೇಕಾದ ಪ್ರವಾಸ ಕಥನಗಳು ಇಂತಿವೆ.

೧. ಕೈಲಾಸಾಧಿಪತಿಯ ಮನೆಯಂಗಳದಲ್ಲಿ
ಮಮತಾರಾವ್
ಅಭಿಜಿತ ಪ್ರಕಾಶನ, ಮುಂಬಯಿ.

೨. ಕೈಲಾಸ ಮಾನಸ
ಶ್ರೀ ವೆಂಕಟೇಶ ಮಾಚಕನೂರ
ವಿಮೋಚನಾ ಪ್ರಕಾಶನ, ಅಥಣಿ.

೩. ಸದ್ದು! ದೇವರು ಸ್ನಾನ ಮಾಡುತ್ತಿದ್ದಾರೆ
ಕೆ.ಸತ್ಯನಾರಾಯಣ
ಡಿ.ಕೆ.ಶಾಮಸುಂದರರಾವ. ಕಾಮಧೇನು ಪುಸ್ತಕ ಭವನ #೫/೧ ನಾಗಪ್ಪ ಬೀದಿ. ಶೇಷಾದ್ರಿಪುರ, ಬೆಂಗಳೂರು-೫೬೦೦೨೦.

೪. ಹಿಮಾಲಯದ ಮಡಿಲಲ್ಲಿ
ಸ್ವಾಮಿ ಅಖಂಡಾನಂದರು
ಶ್ರೀ ರಾಮಕೃಷ್ಣ ಆಶ್ರಮ ಯಾದವಗಿರಿ, ಮೈಸೂರು-೨೦.

೫. ಹಿಮಾಲಯ ಯಾತ್ರೆ

ಸ್ವಾಮಿ ಸೋಮನಾಥಾನಂದರು

ಶ್ರೀ ರಾಮಕೃಷ್ಣ ಆಶ್ರಮ ಯಾದವಗಿರಿ, ಮೈಸೂರು-೨೦.

ಹೀಗೆ ಈ ಮೇಲೆ ವಿವರಿಸಿದಂತೆ ಕನ್ನಡದಲ್ಲಿ ಕೈಲಾಸ ಮಾನಸದ ಕುರಿತಾಗಿ ನಮಗೆ ವಿಪುಲವಾದ ಮಾಹಿತಿಯನ್ನು ಒದಗಿಸುತ್ತವೆ. ಈ ಕೃತಿಗಳ ವಿಶ್ಲೇಷಣೆಯನ್ನು ಈ ಮುಂದಿನಂತೆ ಕಾಣಬಹುದಾಗಿದೆ.

**೨.೧ ಕೈಲಾಸಾಧಿಪತಿಯ ಮನೆಯಂಗಳದಲ್ಲಿ :**

ಈ ಪ್ರವಾಸ ಕಥನ ಶ್ರೀಮತಿ ಮಮತಾರಾವ್ ಅವರದು ವೃತ್ತಿಯಲ್ಲಿ ಬ್ಯಾಂಕಿನ ಉದ್ಯೋಗಿಯಾಗಿದ್ದರೂ ಪ್ರವೃತ್ತಿಯಲ್ಲಿ ಸಾಹಿತ್ಯೋಪಾಸಕರು. ಕನ್ನಡನಾಡು, ನುಡಿ, ಸಂಸ್ಕೃತಿಯ ಬಗೆಗೆ ಅವರಿಗೆ ವಿಶಿಷ್ಟ ಅಭಿಮಾನ. "ಗಿರೀಶ ಕಾರ್ನಾಡರ ನಾಟಕಗಳಲ್ಲಿ ಸ್ತ್ರೀ" ಅವರ ಸಂಶೋಧನ ಸಂಪ್ರಬಂಧ, ಮುಂಬಯಿಯ ಅಭಿಜಿತ ಪ್ರಕಾಶನ ಈ ಕೃತಿಯನ್ನು ಪ್ರಕಟಿಸಿದ್ದು, ಈಗಾಗಲೇ ನಾಡಿನ ವಿದ್ವಾಂಸರ ಗಮನ ಸೆಳೆದಿದೆ. ಬಹು ಭಾಷಾ ವಿಶಾರದರಾಗಿರುವ ಮಮತಾರಾವ್ ಹಿಂದಿ ಭಾಷೆಯಲ್ಲಿಯೂ ಲೇಖನಗಳನ್ನು ಬರೆದು ಸಾಂಸ್ಕೃತಿಕ ಸೇತುವೆಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಸರಳ ಸಜ್ಜನಿಕೆಗೆ ಹೆಸರಾಗಿರುವ ಅವರು ಮುಂಬಯಿ ಕನ್ನಡಿಗರ ಸಾಂಸ್ಕೃತಿಕ ಬದುಕಿನಲ್ಲಿ ಹಾಸುಹೊಕ್ಕಾಗಿದ್ದಾರೆ.

ಮಮತಾರಾವ್ ಸಾಹಸಪ್ರಿಯರು, ಜೀವನವನ್ನೇ ಪಣವಾಗಿಟ್ಟು ಕೈಲಾಸ ಮಾನಸ ಸರೋವರ ಯಾತ್ರೆ ಮಾಡಿದವರು. ಇದನ್ನು ಅವರು ಒಂದು ಅಲೌಕಿಕ ಅನುಭವ ಕಥನವೆಂದೇ ಹೇಳಿಕೊಂಡಿದ್ದಾರೆ.

ಮಮತಾರಾವ್ ರಚಿಸಿದ 'ಕೈಲಾಸಾಧಿಪತಿಯ ಮನೆಯಂಗಳದಲ್ಲಿ' ಒಂದು ಪುಟ್ಟ ಹಾಗೂ ಅದ್ಭುತ ಕೃತಿ. ಇತ್ತೀಚೆಗೆ ಸಾಕಷ್ಟು ಒಳ್ಳೆಯ ಪ್ರವಾಸ ಕೃತಿಗಳು ಬೆಳಕು ಕಾಣುತ್ತಿವೆ. ಆದರೆ ಅವು ಅಮೇರಿಕಾ, ಯುರೋಪ, ಜಪಾನ ಮೊದಲಾದ ಮುಂದುವರೆದ ರಾಷ್ಟ್ರಗಳ ಕುರಿತಾಗಿವೆ.

ಕೈಲಾಸದ ಪ್ರವಾಸದ ಕುರಿತು ಮೊದಲ ಬಾರಿಗೆ ಕನ್ನಡದಲ್ಲಿ ಬಂದ ಕೃತಿ ಮಾನಸ ಸರೋವರ. ಇದು ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರ ಅವರ ಕೃತಿ, ಪ್ರಕಟಗೊಂಡಿದ್ದು ೧೯೩೧ರಲ್ಲಿ. ಮಾನಸ ಸರೋವರ ಪ್ರವಾಸದ ಇಂಚಿಂಚು ಅನುಭವವನ್ನು ಕಣ್ಣಿಗೆ ಕಟ್ಟುವಂತೆ ಕನ್ನಡದಲ್ಲಿ ದಾಖಲು ಮಾಡಿದ ಮೊದಲ ಮುಂಬಯಿ ಕನ್ನಡ ಮಹಿಳೆ ಮಮತಾರಾವ್.

'ಕೈಲಾಸಾಧಿಪತಿಯ ಮನೆಯಂಗಳದಲ್ಲಿ' ಒಂದು ಭಿನ್ನ ಬಗೆಯ ಪ್ರವಾಸ ಕಥನ, ಅದು ಏಕಕಾಲಕ್ಕೆ ಪುರಾಣವೂ ನೂತನವೂ ಆಗುತ್ತಾ ಸಾಗಿದೆ. ಹಲವು ಎಲ್ಲೆಗಳ ಮೀರಿ ಸಾಗುವಂತಹ ಕಥನವಿದು.

ಈ ಪ್ರವಾಸ ಕಥನದಲ್ಲಿ ಲೇಖಕಿ ಪ್ರಕೃತಿ ಮತ್ತು ಮನುಷ್ಯನ ನಡುವಿನ ನಿರಂತರ ಸಂಘರ್ಷದ ಕುರಿತು ಮಾತನಾಡುತ್ತಾರೆ. ನಿಸರ್ಗದ ವಿರಾಟ ಸ್ವರೂಪ ಮನುಷ್ಯನ ಸಣ್ಣತನದ ಪರಿಚಯವೂ ನಮಗಾಗುತ್ತದೆ. ಬರೀ ಪುಣ್ಯ ಸಂಪಾದನೆಗಾಗಿ ಅಥವಾ ಪ್ರಕೃತಿ ಸೌಂದರ್ಯಾನ್ವೇಷಿಯಾಗಿ ಕೈಗೊಂಡ ಯಾತ್ರೆಯು ಇಲ್ಲಿರುವುದರಿಂದ ಒಂದು ನಿರ್ಧಿಷ್ಟ ಅಂತರದಲ್ಲಿ ನಿಂತು ಲೇಖಕರು ಅಲ್ಲಿನ ವಿದ್ಯಮಾನಗಳನ್ನು ಚಿಂತನೆಗೆ ಒಳಗುಮಾಡಿರುವುದು, ಈ ಕೃತಿಯ ಧನಾತ್ಮಕ ಅಂಶವಾಗಿದೆ.

ವೈಚಾರಿಕವಾಗಿ ಸಾಹಸ ಕಥನ ಗಮನ ಸೆಳೆಯುವಂಥದ್ದು. ಚೀನಾದೇಶ ಟಿಬೇಟಿಯನ್ನರನ್ನು ಯಾವರೀತಿಯಲ್ಲಿ ಶೋಷಿಸುತ್ತಾ ಬಂದಿದೆ ಎಂಬ ಬಗೆ ಹೀಗಿದೆ. ತಕಲಾಕೋಟಿನ ರಸ್ತೆಯಲ್ಲಿ ಟಿಬೇಟಿಯನ್ನರಿಗಿಂತ ಹೆಚ್ಚು ಚೀನಿಯರೆ ಕಂಡುಬರುತ್ತಾರೆ. ಮಿಲಿಟರಿ ವೇಷಭೂಷಣದಲ್ಲಿ ಹಾಗೂ ಸೂಟೂಬೂಟಿನಲ್ಲಿ ತಿರುಗಾಡುತ್ತಿರುವ ಚೀನಿ ಪುರುಷರ ತೋಳಿಗೆ ತೆಕ್ಕೆಬಿದ್ದಿರುವ ಆಕರ್ಷಕ ತರುಣಿಯರ ಹಾವಭಾವ ಅವರು ಬಹುಶಃ ವೇಶ್ಯೆಯರಾಗಿರಬೇಕು ಎನ್ನುವುದನ್ನು ಸೂಚಿಸುವಂತಿತ್ತು. ಸ್ಥಳೀಯ ಮಧ್ಯವಯಸ್ಕ ಟಿಬೇಟಿಯನ್ನರು ಕೊಳಕು ಉಡುಗೆ ತೊಡುಗೆಯಲ್ಲಿ ಅಂಗಡಿಗಳಲ್ಲಿ, ಹೊಟೇಲುಗಳಲ್ಲಿ, ರಸ್ತೆಗಳಲ್ಲಿ ಕೆಲಸ ಮಾಡುತ್ತ ಇದ್ದರು. ಲೇಖಕಿ ಟಿಬೇಟಿನಲ್ಲಿದ್ದ ಹದಿನಾಲ್ಕು ದಿನದ ವಾಸದಲ್ಲಿ 'ಶಾಲೆಯ ಸಮವಸ್ತ್ರ ಧರಿಸಿ ಮಕ್ಕಳನ್ನು ಅಥವಾ ಪುಸ್ತಕಗಳನ್ನು ಬಿಡಿ, ದಿನಪತ್ರಿಕೆಗಳನ್ನು ಓದುತ್ತಿರುವ ಯುವಕರನ್ನು ನೋಡಲಿಲ್ಲ' ಎಂದಿರುವರು. ತಕಲಾಕೋಟಿನ ನಗರದಲ್ಲಿ ಸಿನಿಮಾ ಥಿಯಟರಗಳಲ್ಲಿದ್ದವು, ನೈಟ್ ಕ್ಲಬ್‌ಗಳಿದ್ದವು, ಮಧ್ಯಪಾನಕ್ಕೆ ನಿಷೇಧವಿರಲಿಲ್ಲ, ಹೆಣ್ಣು ಗಂಡೆಂಬ ಬೇಧವಿಲ್ಲದೆ ಎಲ್ಲರ ಬಾಯಲ್ಲಿ ಉರಿಯುವ ಸಿಗರೇಟುಗಳಿದ್ದವು. ವೇಶ್ಯಾವಾಟಿಕೆ ಜೋರಾಗಿ ನಡೆಯುತ್ತಿತ್ತು. ಬಡತನ ಕಣ್ಣಿಗೆ ರಾಚುವಂತಿತ್ತು. ಟಿಬೇಟಿನ ಅಶಿಕ್ಷಿತ ಯುವ ಜನಾಂಗದ ಬಗ್ಗೆ ಅವರಿಗೆ ತುಂಬಾ ಖೇದವೆನಿಸಿತು. ನಗರದ ಮುಖ್ಯ ಮಾರ್ಗವನ್ನು ಬಿಟ್ಟರೆ ಅವರು ಕಂಡದ್ದು ಚೀನಾ ಅತಿಕ್ರಮಿಸಿರುವ ಟಿಬೇಟ್ ಅಲ್ಲಿ ಒಳ್ಳೆಯ ರಸ್ತೆಗಳಿಲ್ಲ, ನದಿಗಳ ಮೇಲೆ ಸುವ್ಯವಸ್ಥಿತವಾದ ಸೇತುವೆಗಳಿಲ್ಲ, ಸ್ಥಳೀಯ ಜನರಿಗಾಗಿ ಕಟ್ಟಿದ ಒಳ್ಳೆಯ ವಸತಿ ಸೌಕರ್ಯವಾಗಲಿ ಶಾಲಾ-ಕಾಲೇಜುಗಳಾಗಲಿ ನಾನು ಕಂಡಿಲ್ಲ ಎಂದು ವಿಷಾದ ವ್ಯಕ್ತಪಡಿಸುತ್ತಾರೆ.

ಲೇಖಕಿಯು ಕಂಡಂತೆ ಕಳೆದ ೪೦ ವರ್ಷಗಳಲ್ಲಿ ಚೀನಾ ತನ್ನ ರಾಜ್ಯದ ಇತರ ಭಾಗಗಳಲ್ಲಿ ಮಾಡಿರುವ ಪ್ರಗತಿಯನ್ನು ಗಮನಿಸಿದರೆ ಟಿಬೇಟನ್ನು ನಿರ್ಲಕ್ಷಿಸಿರುವುದು ಮನದಟ್ಟಾಗುತ್ತದೆ. ಚೀನಾ ಸರಕಾರ ಈ ಜನಾಂಗವನ್ನು ಧಾರ್ಮಿಕವಾಗಿ, ನೈತಿಕವಾಗಿ, ಆರ್ಥಿಕವಾಗಿ, ಭೌದ್ಧಿಕವಾಗಿ ನಾಶಗೊಳಿಸುವ ಪರಿಯನ್ನು ಕಣ್ಣಾರೆ ಕಂಡ ಅವರು ನನಗೆ ಭಾರತದಲ್ಲಿ ಸುಖವಾಗಿ ಕುಳಿತು ಸ್ವತಂತ್ರ ಟಿಬೇಟಿನ ಕನಸನ್ನು ಕಾಣುವ ಹಾಗೂ ಜಗತ್ತಿಗೆ ಕಾಣಿಸುವ ಕೆಲಸವನ್ನು ಮಾಡುತ್ತಿರುವ ದಲಾಯಿಲಾಮಾರ ಬಗ್ಗೆ ತುಂಬಾ ಸಿಟ್ಟು ಬಂತು ಎನ್ನುತ್ತಾರೆ. ಮಮತಾರಾವ್ ಅವರು ತಮ್ಮ ಲೇಖನದಲ್ಲಿ ಮಹಿಳೆಯ ಕುರಿತಾಗಿ ಒಂದು ಉದಾಹರಣೆಯನ್ನು ನೀಡುತ್ತಾರೆ. "ನಮ್ಮ ಹೋಟೇಲಿನಲ್ಲಿ ತಂಗಿದ್ದ ರಶಿಯಾದ ಪರ್ವತಾರೋಹಿ ಮಹಿಳೆ 'ಮೊಸ್ಕಲೆವಾಲುಡ್ ಮಿಲಾ' ರಶಿಯಾದ ನ್ಯಾಶನಲ್ ಚಾಂಪಿಯನ್ ಪರ್ವತಾರೋಹಿ, ನಮ್ಮೊಡನೆ ಸ್ನೇಹ ಸಾಧಿಸಿದರು. ಆಕೆಗೆ ಹಿಮಾಲಯದ ಕುರಿತು ವಿಶೇಷ ಆಕರ್ಷಣೆ. ಎವರೆಸ್ಟ್ ಶಿಖರಾರೋಹಣವನ್ನು ಸಹ ಕೈಗೊಂಡಿದ್ದಳು". ಎವರೆಸ್ಟ್ ತುದಿಯನ್ನು ಏರಲಾಗಲಿಲ್ಲ ಎನ್ನುವ ನಿರಾಶೆಯನ್ನು ಮುಚ್ಚಿಡುವ ಪ್ರಯತ್ನದಲ್ಲಿ ಆಕೆ ತನ್ನಂತಹ ಕೆಲವು ಉತ್ಸಾಹಿಗಳನ್ನು ಕೂಡಿಸಿಕೊಂಡು ಪುನಃ ಪುನಃ ಹಿಮಾಲಯದ ಬೇರೆ ಬೇರೆ ಭಾಗಗಳನ್ನು ಸಂದರ್ಶಿಸುತ್ತಾಳೆ. ಅವಳ ನೆಚ್ಚಿನ ತಾಣಗಳಲ್ಲಿ ಮುಖ್ಯವಾದುದು ಕೈಲಾಸ ಶಿಖರ ಈ ಬಾರಿ ಮೂವರನ್ನು ಕರೆದುಕೊಂಡು ತಾನೇ ಡ್ರೈವ ಮಾಡುತ್ತ ಬಂದ ಮೊಸ್ಕಲೆವಾಲುಡ್ ಮಿಲಾ ಅವರಿಗಾಗಿ ರಶಿಯಾದ ಚೀಸ್ ಬ್ರೇಡ್, ಚಾಕುಲೇಟ ಇತ್ಯಾದಿಗಳನ್ನು ಸಹ ಹೊತ್ತು ತಂದಿದ್ದಳು, ಅವುಗಳನ್ನು ಭಾರತೀಯರೊಂದಿಗೆ ಹಂಚಿಕೊಂಡಳು. ಮಮತಾರಾವ್ ಅವರನ್ನು ಭಾರತೀಯ ಊಟಕ್ಕೆ ಆಮಂತ್ರಿಸಿದಾಗ ಖುಷಿಯಿಂದ ಒಪ್ಪಿಕೊಂಡಳು.[೧] ಅವಳ ಸಾಹಸ ಛಲಗಳಿಂದಲೇ ಇದು ಕಾಲು ಭಾಗ ತುಂಬಿಕೊಂಡಿದೆ.

ಮಮತಾರಾವ್ ಟಿಬೇಟ್ ಪರಿಸರದ ಕೌಟುಂಬಿಕ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ದಾಖಲಿಸುವರು. ಆ ಮದುವೆಯಾದ ಹೆಣ್ಣು ಅವನ ಉಳಿದ ತಮ್ಮಂದಿರಿಗೆಲ್ಲರಿಗೂ ಪತ್ನಿಯಾಗುತ್ತಾಳೆ. ಆದುದರಿಂದ ಅವರಲ್ಲಿ ಮನೆಗಳು ಒಡೆದಿಲ್ಲ, ಮನೆತನಗಳು ಹೆಚ್ಚಾಗಿಲ್ಲ. ವಿಧವಾ ವಿವಾಹವೂ ಇಲ್ಲಿ ಸಾಮಾನ್ಯ, ವಿಧವೆ ಮತ್ತು ವಿಧುರರ ನಡುವೆ ನಿಯೋಗ ಪದ್ಧತಿಯೂ ಇಲ್ಲಿ ಕಂಡುಬರುತ್ತದೆ. ತಮ್ಮ ತಮ್ಮ ಮನೆಯಲ್ಲಿದ್ದು ಕೂಡಿಕೊಳ್ಳುವಿಕೆಯಿಂದ ಹುಟ್ಟಿದ ಮಗು ಹೆಣ್ಣಿನ ಸ್ವತ್ತು. ಸಾಮಾನ್ಯ ವಿವಾಹದಿಂದಾದ ಮಕ್ಕಳಿಗೆ ಸಿಗುವ ಹಕ್ಕು

೧.ಮಮತಾರಾವ್. 'ಕೈಲಾಸಾಧಿಪತಿಯ ಮನೆಯಂಗಳದಲ್ಲಿ' ಪು.ಸಂ-೯೨.

ಬಾಧ್ಯತೆಗಳೆಲ್ಲವೂ ಈ ಮಗುವಿಗೆ ಕೂಡಾ ಸಿಗುವುದು ವಿಶೇಷ. ಚೀನಿ ಸೈನಿಕರು ಇಲ್ಲಿಯ ಜನತೆಯ ಮೇಲೆ ಮುಖ್ಯವಾಗಿ ಮಹಿಳೆಯರ ಮೇಲೆ ನಡೆಸುವ ಬರ್ಬರ ಅತ್ಯಾಚಾರ ದೌರ್ಜನ್ಯಕ್ಕೆ ಎಡೆಯಿಲ್ಲ. ಕುಟುಂಬ ನಿಯೋಜನೆಯನ್ನು ಕಡ್ಡಾಯವನ್ನಾಗಿ ಮಾಡಿ ಅದನ್ನು ಉಲ್ಲಂಘಿಸಿದವರಿಗೆ ಕಠಿಣ ಶಿಕ್ಷೆಯನ್ನು ವಿಧಿಸಲಾಗುತ್ತದೆ. ಒಟ್ಟಿನಲ್ಲಿ ಇಲ್ಲಿಯ ಜನತೆಯನ್ನು ಧಾರ್ಮಿಕವಾಗಿ, ನೈತಿಕವಾಗಿ, ಆರ್ಥಿಕವಾಗಿ ನೆಲಕಚ್ಚುವಂತೆ ಮಾಡುವ ಎಲ್ಲಾ ಮಾರ್ಗಗಳನ್ನು ಚೀನಿ ಸರಕಾರವು ಅನುಸರಿಸುತ್ತದೆ ಎನ್ನುವ ಮಾತುಗಳು ಟಿಬೇಟಿಯನ್ ಮಹಿಳೆಯರ ಜೀವನದ ಒಳನೋಟಗಳನ್ನು ಬಿಂಬಿಸಿವೆ.[೨]

ಹಿಮಾಲಯದ ತಪ್ಪಲಲ್ಲಿ ನಿಂತು ಲೇಖಕಿ ಹೀಗೆ ಯೋಚಿಸುತ್ತಾರೆ. 'ಹಿಮಾಲಯದ ಭೂಭಾಗದ ಉದ್ದಕ್ಕೂ ಇರುವ ಶಿವನ ಮಂದಿರಗಳಿಗೆ ಲೆಕ್ಕವಿಲ್ಲ, ಹಿಮಾಲಯದ ಭೂಖಂಡ ಹಿಮ ಪರ್ವತರಾಜನ ಮುದ್ದಿನ ಮಗಳು ಗಿರಿಜೆಯ ತವರೂರು. ಇಲ್ಲಿಯ ಹಸುರಿನ ನಾಡಿನಲ್ಲಿ ಹುಟ್ಟಿಬೆಳೆದ ಗಿರಿಜೆ ತಪಸ್ಸು ಗೈದು ಸುಡುಗಾಡಿನ ಶಿವನನ್ನು ವರಿಸಿದ ವಿಷಯ ಇಲ್ಲಿಯ ಜನರ ಬಾಯಿಂದ ಹಾಡಿನ ರೂಪದಲ್ಲಿ ಸದಾ ನಲಿದಾಡುತ್ತಿರುತ್ತದೆ. ಶಿವ-ಪಾರ್ವತಿಯರ ಬಗೆಗೆ ನೂರಾರು ಐತಿಹ್ಯಗಳನ್ನು, ಕಥೆಗಳನ್ನು ಇವರು ಹೇಳುತ್ತಾರೆ. ಅವರ ದೃಷ್ಟಿಯಲ್ಲಿ ನಾವು ಶಿವನ ಸಂಬಂಧಿಕರು, ಅವನ ಕರೆಗೆ ಓಗೊಟ್ಟು ಗಿರಿಜೆಯ ತವರನ್ನು ಹಾದು ಹೋಗುವವರು, ನಮ್ಮ ಕ್ಷೇಮ ನಮ್ಮ ಆದರಾತಿಥ್ಯ ಅವರ ಸೌಭಾಗ್ಯ, ಅದಕ್ಕಾಗಿ ಅವರು ನಗು ಮೊಗದೊಂದಿಗೆ ಸದಾ ಸಿದ್ಧರು'.

ಪರ್ವತರಾಶಿಯ ನಡುವಿನ ಕ್ಯಾಂಪೊಂದರಲ್ಲಿ ರಾತ್ರಿ ತಂಗಲು ವ್ಯವಸ್ಥೆ ಮಾಡಲಾಗಿತ್ತು. ಮಣ್ಣಿನಗೋಡೆಗಳಿಲ್ಲದ ಮಲಗುವ ಕೋಣೆ ಅಲ್ಲಿ ಸಿಧ್ಧವಾಗಿತ್ತು. ಇದನ್ನು ನೋಡಿ ಅವರು ಯಾವೊಂದು ಭಯವಿಲ್ಲದೆ ಲೇಖಕಿಯರ ತಂಡ ಅಂದರೆ ನವದುರ್ಗೆಯರು ಮಲಗುವ ಸಿಧ್ಧತೆ ಮಾಡಿದರು ಎಂದು ಹೇಳುವಲ್ಲಿ ಅವರ ಧೈರ್ಯ, ಛಲ ಚನ್ನಾಗಿ ಬಿಂಬಿತವಾಗಿವೆ. ಮೂವತ್ತು ದಿನಗಳ ಅವಶ್ಯಕ ವಸ್ತುಗಳೆಲ್ಲ ಎರಡು ಮೂಟೆಗಳಲ್ಲಿ ತುಂಬಲಾದುದಕ್ಕೆ ಆಶ್ಚರ್ಯ ವ್ಯಕ್ತಪಡಿಸುತ್ತ ಸಾಮಾಜಿಕ ಜೀವನದಲ್ಲಿ ಎಷ್ಟೆಲ್ಲ ಅನಾವಶ್ಯಕ ವಸ್ತುಗಳನ್ನು ಸಂಗ್ರಹಿಸುತ್ತೇವಲ್ಲ. ಮನುಷ್ಯನ ಆಸೆಗೆಲ್ಲಿ ಕೊನೆಯಿದೆ? ಎಂದು ಪ್ರಶ್ನಿಸಿ ನಮ್ಮನ್ನು ಚಿಂತನೆಗೆ ಈಡುಮಾಡುತ್ತಾರೆ. ಹಿಮಚ್ಛಾದಿತ ಕೈಲಾಸದಲ್ಲಿ ಚಳಿಯಿಂದ ರಕ್ಷಿಸಿಕೊಳ್ಳಲು ಮೈಯ ಯಾವ ಭಾಗವೂ ಕಾಣದಂತೆ ಉಡುಪು ಧರಿಸಿದ್ದನ್ನು ವಿವರಿಸುತ್ತಾ, ನಮ್ಮ ವೇಷಭೂಷಣಗಳು ನಮ್ಮ ಶಿವನ ಗುಣಗಳಂತೆಯೆ ಇದ್ದವು. ಬಣ್ಣ-ಬಣ್ಣದ, ಚಿತ್ರ-ವಿಚಿತ್ರ ಉಡುಪುಗಳನ್ನು ಧರಿಸಿ ಅಂದಗೆಟ್ಟ ಟೋಪಿಗಳನ್ನು ತಲೆಗೇರಿಸಿ ಕೈಯಲ್ಲಿ

೨.ಮಮತಾರಾವ್. 'ಕೈಲಾಸಾಧಿಪತಿಯ ಮನೆಯಂಗಳದಲ್ಲಿ' ಪು.ಸಂ-೨೮

ಕೋಲೂರುತ್ತಾ ಏದುಸಿರು ಬಿಡುತ್ತಾ ಕುಂಟುತ್ತ ನಡೆಯುವ ಪ್ರವಾಸಿಗರ ವಿದೂಷಕ ಭಂಗಿಗಳನ್ನು ಕಂಡು ದೇವತೆಗಳೆಲ್ಲ ನಕ್ಕಿರಲೇ ಬೇಕು. ಅವರ ಬರಡು ಜೀವನದಲ್ಲಿ ಇಂತಹ ತಮಾಷೆಯ ಕ್ಷಣಗಳನ್ನು ಒದಗಿಸಿ ಕೊಡಲಿಕ್ಕಾಗಿಯೇ ಬಹುಶಃ ಶಿವನು ನಮ್ಮನ್ನು ಅಲ್ಲಿಗೆ ಆಹ್ವಾನಿಸುತ್ತಿರಬೇಕು ಎಂಬಲ್ಲಿ ವ್ಯಕ್ತವಾದ ತಿಳಿಹಾಸ್ಯ ಮನದುಂಬುವಂತಿದೆ. ಮಮತಾರಾವ್ ಅವರು ತಮ್ಮ "ಕೈಲಾಸಾಧಿಪತಿಯ ಮನೆಯಂಗಳದಲ್ಲಿ" ಎನ್ನುವ ಪ್ರವಾಸ ಕಥನದಲ್ಲಿ ವಿಶಿಷ್ಟವಾಗಿ ಕೈಲಾಸ ಮಾನಸದ ವಿಷಯ ವಸ್ತುವನ್ನು ಹೇಳಿಸಿಟ್ಟಿದ್ದಾರೆ.

"ಕೈಲಾಸಾಧಿಪತಿಯ ಮನೆಯಂಗಳದಲ್ಲಿ" ಒಂದು ಭಿನ್ನ ಬಗೆಯ ಪ್ರವಾಸ ಕಥನ. ಮೊದಲೇ ಗೊತ್ತು ಪಡಿಸಿದ ಪ್ಯಾಕೇಜ್ ಟ್ರಿಪ್‌ಗಳ ಮೂಲಕ ಉತ್ತಮವಾದ ಬಸ್ಸು, ರೈಲು, ವಿಮಾನಗಳನ್ನು ಹತ್ತಿ ಇಳಿಯುವ ವಿಲಾಸಿ ಪ್ರವಾಸವಿದಲ್ಲ, ಅಂಕುಡೊಂಕಿನ ಪ್ರಪಾತಮಯವಾದ ಅರಣ್ಯಮಾರ್ಗ ಅಗಮ್ಯವಾದ ಕಾಡು-ಕಣಿವೆ, ಮಂಜು ಮುಸುಕಿನ ಉಸಿರುಗಟ್ಟಿಸುವ ಸನ್ನಿವೇಶ, ನಿಸರ್ಗದ ರುದ್ರ ಸ್ವರೂಪ ಜೊತೆಗೆ ಪ್ರಕೃತಿಯ ಸೌಂದರ್ಯವನ್ನು ಆಸ್ವಾದಿಸುವ ಅದ್ಭುತ ಅವಕಾಶ.

ಈ ಪ್ರವಾಸ ಕಥನವನ್ನು ಓದಿದಾಗ ಮೊದಲು ಲೇಖಕಿಯರಲ್ಲಿನ ಕೈಲಾಸ-ಮಾನಸ ಸರೋವರಕ್ಕೆ ಹೋಗುವ ಹಂಬಲ ಎಷ್ಟರ ಮಟ್ಟಿಗೆ ಇತ್ತು ಎಂಬುದು ತಿಳಿದು ಬರುತ್ತದೆ. ಯಾವಾಗಲು ಕೈಲಾಸ-ಮಾನಸ ಸರೋವರಕ್ಕೆ ಸಂಬಂಧಿಸಿದ ಪುಸ್ತಕಗಳನ್ನು, ಲೇಖನಗಳನ್ನು ಹುಡುಕಿ ಓದಲಾರಂಭಿಸಿದರು. ಅದರ ಬಗೆಗೆ ಕುತೂಹಲರಾದರು. ಕೊನೆಗೆ ಯಾತ್ರೆಗೆ ಹೋಗುವದಕ್ಕೆ ಸಜ್ಜಾದರು. ದಿಲ್ಲಿಯಲ್ಲಿ ಪೂರ್ವ ತಯಾರಿಯ ಮೂರು ದಿನಗಳನ್ನು ಕಳೆದರು.

ಲೇಖಕಿಯರು ಅನುಭವಿಸಿದ ತೊಂದರೆಗಳು ತುಂಬಾ ವಿಸ್ಮಯಕಾರಿಗಳಾಗಿವೆ. ಅವರು ತೊಂದರೆಯಿಂದ ಪಾರಾಗಿರುವದು ಒಂದು ವಿಸ್ಮಯ. ಬುಧಿಯಿಂದ ಗುಂಜಿಗೆ ತೆರಳುವಾಗ ಜವಾನನೊಬ್ಬನು ವಂದಿಸುವಾಗ ಅವನ ಕೈಯಲ್ಲಿದ್ದ ಬಂದೂಕಿನ ತುದಿ ಲೇಖಕಿಯರು ಕುಳಿತಿದ್ದ ಕುದುರೆ ಮುಖಕ್ಕೆ ಚುಚ್ಚಿತು, ಆಗ ಕುದುರೆ ಭಯಭೀತವಾಗಿ ತನ್ನ ಮುಂದಿನ ಎರಡೂ ಕಾಲನ್ನು ಮೇಲಕ್ಕೆ ಎತ್ತಲು ಲೇಖಕಿಯರು ನೆಲಕ್ಕೆ ಉರುಳಿದರು, ಕುದುರೆಯ ಜೀನಿನ ಕಾಲು ತುದಿಯ ಭಾಗದಲ್ಲಿ ಲೇಖಕಿಯರ ಕಾಲು ಸಿಲುಕಿತ್ತು ಅದು ಎಳೆಯುತ್ತಾ ಅರ್ಧ ಫರ್ಲಾಂಗಿನಷ್ಟು ದೂರದ ತನಕ ಓಡಿತು ಕೆಲವರು ನೋಡಿ ಇವರನ್ನು ರಕ್ಷಿಸಿದರು. ಎಷ್ಟೇ ಕಠಿಣ ಪರಿಸ್ಥಿತಿ ಇದ್ದರೂ ಕೈಲಾಸ-ಮಾನಸ ಸರೋವರ ನೋಡುವ ಬಯಕೆ ಲೇಖಕಿಯರನ್ನು ಮುಂದೆ ಸಾಗಲು ಪ್ರೇರೇಪಿಸಿತು.

ಚೀನಾದಲ್ಲಿ ಆಚರಿಸಿದ ಭಾರತದ ಸ್ವಾತಂತ್ರ್ಯದಿನ ನಾವೆಲ್ಲರೂ ಒಟ್ಟಾಗಿ ಮಾತೃ ಭೂಮಿಯನ್ನು ನೆನೆಸುತ್ತಾ ಮೆಲುದನಿಯಲ್ಲಿ ಜನ-ಗಣ-ಮನ ಹಾಡಿದೆವು ಎಂದು ಹೇಳುವಲ್ಲಿ ದೇಶಪ್ರೇಮ ಎದ್ದು ಕಾಣುತ್ತದೆ.[೩] ಇಲ್ಲಿ ಲೇಖಕಿ ಮತ್ತು ಸಂಗಡಿಗರು ದೇಶ ಬಿಟ್ಟು ಹೋದರೂ ದೇಶ ಪ್ರೇಮವು ಅವರಲ್ಲಿ ಹೆಚ್ಚಾಗಿತ್ತು ದೇಶದ ಬಗೆಗಿನ ಪ್ರೀತಿ ಅವರನ್ನು ಚೀನಾದಲ್ಲಿಯೂ ಸ್ವಾತಂತ್ರ್ಯ ದಿನಾಚರಣೆಯನ್ನು ಪ್ರೀತಿಯಿಂದ, ಗೌರವ ಪೂರ್ವಕವಾಗಿ ಆಚರಿಸಿದರು.

ಪ್ರಕೃತಿಯ ವಿಸ್ಮಯಕಾರಿ ಪ್ರಸಂಗಗಳನ್ನು ಲೇಖಕಿಯರು ಕಂಡಿರುವುದನ್ನು ನೋಡಿದಾಗ ಅವರಿಗೆ ಸಾಕ್ಷಾತ್ ದೇವರ ದರ್ಶನವಾಗಿದೆ ಎನ್ನುವದು ತಿಳಿಯುತ್ತದೆ. "ಆಕಾಶದಲ್ಲಿ ನಕ್ಷತ್ರಕ್ಕಿಂತಲೂ ದೊಡ್ಡದಾದ ತುಸು ಹಳದಿಬಣ್ಣದ ಪ್ರಕಾಶಮಾನವಾದ ಬೆಳಕು ಕಂಡಂತಾಯಿತು. ನನ್ನ ಭ್ರಮೆಯೋ ಏನೋ ಎಂದೆನ್ನುತ್ತಾ ಆ ಬೆಳಕಿನಿಂದ ಕಣ್ಣು ಕಾಣಿಸದೆ ಕೈಚಾಚಿ ಮಲ್ಲಿಕಾಳನ್ನು ಕುಲುಕಾಡಿಸಿದೆ. ಪಕ್ಕನೆ ಎದ್ದವಳು ಏನು ಎನ್ನುತ್ತ ಆಕಾಶದ ಕಡೆಗೆ ನೋಡಿದಳು. ಬಹಳ ಹೊತ್ತಿನವರೆಗೆ ಒಂದೇ ಸ್ಥಾನದಲ್ಲಿ ಸ್ಥಿರವಾಗಿದ್ದ ಆ ಪ್ರಕಾಶ ನಿಧಾನವಾಗಿ ಕೆಳಗಿಳಿಯಲು ಪ್ರಾರಂಭಿಸಿದಾಗ ನಮ್ಮಿಬ್ಬರ ಎದೆ ಡವಗುಟ್ಟುವಿಕೆ ಶುರುವಾಯಿತು, ಮೆಲ್ಲಮೆಲ್ಲನೆ ಕೆಳಗಿಳಿದ ಆ ಪ್ರಕಾಶ ಸರೋವರದ ಮೇಲೆ ಬಂದು ನಿಂತಿತು. ಕ್ರಮೇಣ ಅಲ್ಲಿಂದಿಲ್ಲಿಗೆ ತೇಲಾಡತೊಡಗಿತು. ಸುಮಾರು ಮುಕ್ಕಾಲು ಗಂಟೆಯ ತನಕ ಹಾಗೆಯೆ ತೇಲಾಡುತ್ತರುವಂತೆ ಕಾಣಿಸಿದ ಆ ಪ್ರಕಾಶ ಹಠಾತ್ತಾಗಿ ಇಲ್ಲವಾಯಿತು". ಲೇಖಕಿಯ ಈ ವಿಸ್ಮಯಕಾರಿ ಅನುಭವವು ಓದುಗರಿಗೆ ಅಗೋಚರ ಶಕ್ತಿಯ ಬಗ್ಗೆ ವಿಶ್ವಾಸ ಮೂಡಿಸುವಂತಹದ್ದಾಗಿದೆ.

## ೨.೨ ಕೈಲಾಸ ಮಾನಸ :

ವೆಂಕಟೇಶ ಮಾಚಕನೂರರವರು ೨೦೦೮ ರಲ್ಲಿ ಕೈಲಾಸ ಯಾತ್ರೆಯನ್ನು ಕೈಗೊಂಡರು ಕೈಲಾಸ ಪರಿಸರದಲ್ಲಿ ಸಾಮಾನ್ಯವಾಗಿ ಎಲ್ಲ ಯಾತ್ರಿಕರಿಗೂ ಒಂದಿಲ್ಲೊಂದು ದಿವ್ಯ ಅನುಭೂತಿ ಆಗುವಂತೆ ಲೇಖಕರಿಗೂ ಕೂಡಾ ಆಗಿದೆ. ವೆಂಕಟೇಶ ಮಾಚಕನೂರರವರ 'ಕೈಲಾಸ-ಮಾನಸ' ಓದಿದಾಗ ಕೈಲಾಸಕ್ಕೆ ಹೋಗಿ ಬಂದ ಅನುಭವವಾಗುವುದಲ್ಲದೆ, ಕೈಲಾಸಕ್ಕೆ ಹೋಗಿ ಬರುವ ಉತ್ಕಟ ಇಚ್ಚೆ ಉಂಟಾಗುತ್ತದೆ.

ವೆಂಕಟೇಶ ಮಾಚಕನೂರರವರಿಗೆ ಮಾನಸ ಸರೋವರದ ಪರಿಸರ, ಕೈಲಾಸ ಮಾನಸ ಸರೋವರದ ಪರಿಕ್ರಮ ಅಪೂರ್ವ ಆನಂದವನ್ನುಂಟುಮಾಡಿದೆ. ಪರಿಕ್ರಮದ

---

೩.ಮಮತಾರಾವ್. ಕೈಲಾಸಾಧಿಪತಿಯ ಮನೆಯಂಗಳದಲ್ಲಿ ಪು.ಸಂ-೬೧

ವೇಳೆ ಸಣ್ಣದಾಗಿ ಹಿಮ ಬೀಳುತ್ತಿತ್ತು. ಮೈನಡುಗಿಸುವ ಚಳಿ ಇತ್ತು, ದಾರಿಯಲ್ಲಿ ನಾಲ್ಕು ಯಾತ್ರಾರ್ಥಿಗಳ ಶವ ನೋಡಿ ಲೇಖಕರಿಗೆ ತುಂಬ ಭಯವಾಗಿತ್ತು, ಆದರೆ ಕೈಲಾಸ ಶಿಬಿರದ ವಿಶಾಲರೂಪವನ್ನು ನೋಡುತ್ತಾ ಎಲ್ಲವನ್ನು ಮರೆತರು. ಡೋಲ್ಮಲಾಪಾಸ ಏರಿದ ಮೇಲೆ ಅಲ್ಲಿ ಧ್ಯಾನಮಗ್ನನಾಗಿ ಕುಳಿತುಬಿಟ್ಟರು. 'ಸುಖವೂ ಇಲ್ಲಿದೆ; ದುಃಖವೂ ಇಲ್ಲಿದೆ' ಎಂಬುದು ಲೇಖಕರಾದ ವೆಂಕಟೇಶ ಮಾಚಕನೂರರ ಅಭಿಪ್ರಾಯ.

'ಕೈಲಾಸ ಇದೊಂದು ಅಳಿವಿಲ್ಲದ ನೈಸರ್ಗಿಕ ಸ್ಥಾವರ, ಮಾನಸ ಸರೋವರ ಕಿನ್ನರ ಲೋಕದ ಬತ್ತದ ಆಗರ' ಹಿಮಾಲಯ ಪರಿಸರವೇ ದೇವಲೋಕದ ಕೈಲಾಸ. ಶಿವನ ಹೆಡ್‌ಕ್ವಾಟರ್ ಎಂಬುದು ಭಾರತೀಯರ ಪರಂಪರಾಗತ ಭಾವನೆ. ಅವುಗಳ ಯಾತ್ರೆ ಆಸ್ತಿಕರ ಜೀವಮಾನದ ಆಶೆ. ಕೈಲಾಸ ಮಾನಸಕ್ಕೆ ಹೋಗುವುದು ಹಿಂದೂಗಳ ಪಾಲಿಗೆ ಸಾಮಾನ್ಯ ಪ್ರವಾಸವಲ್ಲ! ದಿವ್ಯಾನುಭೂತಿಯ ಯಾತ್ರೆ. ಡಾ.ಬಸವರಾಜ ಮಲಶೆಟ್ಟಿಯವರು ಹೇಳುವಹಾಗೆ ಕೈಲಾಸದ ಯಾತ್ರೆಯ ಹಿಂದೆ ಒಂದು ಭಾವುಕ ಒತ್ತಡವಿರುವುದು ಸ್ಪಷ್ಟ. ಭಾರತೀಯರ ಮನಸ್ಸಿನಲ್ಲಿ ದೈವ ಶ್ರಧ್ಧೆಯನ್ನು ಸಂಪೂರ್ಣ ಮುಕ್ತಗೊಳಿಸುವುದು ಸಾಧ್ಯವಿಲ್ಲವೇನೋ! ನಾವು ಅದನ್ನು ನಿರಾಕರಿಸಿದಷ್ಟು ಅದು ಹೆಚ್ಚು ನಮ್ಮನ್ನು ಆವರಿಸಿಕೊಳ್ಳುತ್ತದೆ. ವೆಂಕಟೇಶ ಮಾಚಕನೂರರ ಕೈಲಾಸ ಮಾನಸದ ಮುನ್ನುಡಿಯಲ್ಲಿ "ಓರ್ವ ಯಾತ್ರಿಕನಿಗಿಂತ ಓರ್ವ ಪ್ರವಾಸಿಯಾಗಿ ತಾನು ಈ ಯಾತ್ರೆಯನ್ನು ಆನಂದಿಸುತ್ತೇನೆ" ಎಂದು ಹೇಳಿದ್ದಾರೆ. ಆದರೆ ಅವರದು ಮೂಲತಃ ಯಾತ್ರೆ ಅದನ್ನು ಪ್ರವಾಸವಾಗಿ ಪರಿಭಾವಿಸಿಕೊಳ್ಳುವುದು ಅವರ ವೈಚಾರಿಕ ವ್ಯಕ್ತಿತ್ವ, ಅವರು ಇದನ್ನು ಕೈಲಾಸವಾಸಿ ತಮ್ಮ ತಂದೆಗೆ ಅರ್ಪಿಸಿದ್ದಾರೆ. ತಂದೆಯ ಹೆಸರಿನಲ್ಲಿ ಯಾತ್ರೆ ಪೂರೈಸಿದ್ದೇನೆಂದು ಹೇಳಿದ್ದಾರೆ, ಅರ್ಚಕರಿಗೆ ದಕ್ಷಿಣೆ ಕೊಡುವುದು, ರುದ್ರಾಕ್ಷಿ ಮಾಲೆ ಧರಿಸುವುದು, ಮಾನಸ ಸರೋವರದಲ್ಲಿ ಸ್ನಾನ ಮಾಡುವುದು ಅವರೊಳಗಿನ ನಂಬುಗೆಗೆ ಹಲವು ನಿದರ್ಶನಗಳು. ಕೈಲಾಸ–ಮಾನಸದ ಯಾತ್ರೆಯ ಕಥನದ ಯೋಗ ಕೂಡಾ ಅವರ ಪಾಲಿಗೆ ಪಂಚಾಮೃತದ ಭಾಗ್ಯ'.

ಪ್ರವಾಸ ಕಥನದ ಆರಂಭದಲ್ಲಿಯೇ ತಮ್ಮ ಆಸ್ತಿಕ ನಾಸ್ತಿಕರ ದ್ವಂದ್ವಗಳನ್ನು ಬಿಚ್ಚಿಡುತ್ತಾರೆ. ಅದಕ್ಕೆ ಯಾತ್ರೆಯ ಅರ್ಧಭಾರವನ್ನು ಕೈಲಾಸನಾಥನ ಹೆಗಲಿಗೆ ಹಾಕಿ ಉಳಿದ ಅರ್ಧಪ್ರವಾಸದ ಭಾರವನ್ನು ತಮ್ಮ ತಲೆ ಮೇಲೆ ಹೊತ್ತುಕೊಳ್ಳುವರು, ಹಿಂದಿನ ಎರಡು ಪ್ರವಾಸದ ಕಥನಗಳಲ್ಲಿ ಅನುಭವಿಸಿದ ಧನ್ಯತೆ, ನಾವಿನ್ಯತೆ ಬದುಕಿನಲ್ಲಿ ಬಯಲಿನೊಂದಿಗೆ ಅನುಸಂಧಾನಗೊಳಿಸುವ ಆಧ್ಯಾತ್ಮಿಕ ಅನನ್ಯತೆ ಇಲ್ಲಿವೆ. ಜೊತೆಗೆ ನಿಸರ್ಗ, ಮನಸ್ಸು, ಮನುಷ್ಯ, ಧರ್ಮ, ದೇವರ ಜಿಜ್ಞಾಸೆ ಈ ಪ್ರವಾಸ ಕಥನಕ್ಕೊಂದು ತಾತ್ವಿಕ ನೆಲೆಗಟ್ಟು

ನಿರ್ಮಿಸಿದೆ. ಮೇಲಾಗಿ ಕೈಲಾಸಕ್ಕೆ ಹೋಗಿ ಬರುವದೊಂದು ಲೇಖಕರಿಗೆ ಯಾತ್ರೆಗಿಂತ ಪ್ರವಾಸ ಎಂದೆನಿಸಿತ್ತು. ಕೈಲಾಸ ಪರಿಸರದ ಹಿಮಾಲಯದಲ್ಲಿ ಚಾರಣ ವೀಕ್ಷಣೆ ಅವರ ಮೊದಲ ಆಕರ್ಷಣೆಯಾಗಿತ್ತು. ಪ್ರವಾಸಿ ಸ್ಥಳಗಳು ವಿಶಿಷ್ಟವಾಗಿದ್ದವು. ಲೇಖಕರ ಎಳೆತ ಅಂಥ ಕಡೆ ಹೆಚ್ಚು.

ಭಾವುಕ (ಭಕ್ತಾದಿಗಳು) ಯಾತ್ರಾರ್ಥಿಗಳು, ಎಲ್ಲ ಕಷ್ಟಗಳನ್ನು ಸಹಿಸಿ ಕೊನೆಗೆ ಕೈಲಾಸ ಮಾನಸ ಸರೋವರ ಏರಿ "ಕೈಲಾಸ ಪರ್ವತ ನೋಡುತ್ತಿದ್ದಂತೆ" ದೇಹದ ದಣಿವೆಲ್ಲ ದೂರವಾಗಿ ಶಿವನ ಸಾನಿಧ್ಯವನ್ನೂ ಅನುಭವಿಸುತ್ತ ಅನಿರ್ವಚನೀಯ ಆನಂದ ಅನುಭವಿಸುವ ಪರಿ ಅನನ್ಯ. ಭಾವುಕ ಭಕ್ತರಿಗೆ ಅದೊಂದು ಜೀವಮಾನದ ಆನಂದದ ಕ್ಷಣ, ಅವರು ಆನಂದಭಾಷ್ಪವನ್ನೇ ಶಿವನಿಗೆ ಅರ್ಪಿಸಿ ಧನ್ಯರಾಗುತ್ತಿದ್ದ ಪರಿಯನ್ನು ಅತ್ಯಂತ ಮನೋಜ್ಞವಾಗಿ ನಿರೂಪಿಸಿದ್ದಾರೆ.

ಪ್ರವಾಸಿಗರ ಎದುರುಗಡೆ ಕೈಲಾಸ ಪರ್ವತವಿದ್ದರೆ ಬಲಗಡೆ ನಂದಿ ಬೆಟ್ಟ. ನಂದಿ ಬೆಟ್ಟವೆಂದರೆ ಒಂದು ಬೆಟ್ಟ ನಂದಿ ಆಕಾರದಲ್ಲಿದೆ. ನೋಡಲು ನಂದಿ ತರ. ಸಹಜವಾಗಿಯೇ ಕಾಲು ಮಡಚಿ ಶಿವ ಮಂದಿರಗಳ ಎದುರು ಮಲಗಿದ ನಂದಿ ವಿಗ್ರಹದ ರೀತಿಯಲ್ಲಿಯೇ ಕೈಲಾಸ ಪರ್ವತದ ಎದುರಿನ ಬೆಟ್ಟದ ಸಾಲುಗಳೊಂದರಲ್ಲಿ ನಂದಿ ಬೆಟ್ಟ, ಆ ಬೆಟ್ಟದ ಆಕಾರ ಭವ್ಯತೆ ನೋಡಿದ ಯಾರಲ್ಲೂ ಭಕ್ತಿಭಾವ ಸ್ಫುರಿಸದೇ ಇರದು. ಕೈಲಾಸ ಪರ್ವತ ಲಿಂಗಾಕಾರದಲ್ಲಿತ್ತು, ಮತ್ತು ಸಂಪೂರ್ಣ ಹಿಮಚ್ಛಾದಿತವಾಗಿತ್ತು. ಸಾಮಾನ್ಯವಾಗಿ ಕೈಲಾಸ ಪರ್ವತವೆಂದರೆ ಅದೇ ಎಂಬುದಾಗಿ ಕೈಲಾಸ ಮಾನಸ ಪರಿಸರವನ್ನು ವರ್ಣಿಸಿ ಓದುಗರಿಗೆ ದರ್ಶಿಸಿದ್ದಾರೆ.

ಶ್ರೀ ವೆಂಕಟೇಶ ಮಾಚಕನೂರ ಅವರ ಪ್ರವಾಸ ಕಥನ 'ಕೈಲಾಸ ಮಾನಸ' ಏಕ ಮುಖವಾಗಿಲ್ಲ, ಬಹುಮುಖ ನೆಲೆಗಳಿಂದ ಪ್ರವಾಸಿ ತಾಣಗಳನ್ನು ಪರಿಶೀಲಿಸುವ ಗುಣ; ಅವರ ವಿಚಾರಧಾರೆ, ಸಂವಿಧಾನಶೀಲತೆ, ಸಮಚಿತ್ತತೆ, ಕಲ್ಪನೆ, ಭಾವನೆಗಳ ಹದವಾದ ವಿವರಗಳಿಂದಾಗಿ ಓದುಗರಿಗೆ ಪ್ರಿಯವಾಗುತ್ತದೆ.

ಅಮೂಲ್ಯ ಮಾಹಿತಿ, ಸೂಕ್ಷ್ಮ ವೀಕ್ಷಣೆ, ನವಿರಾದ ಹಾಸ್ಯ ಹಾಗೂ ಅನುಭವಗಳನ್ನು ನಿರೂಪಿಸುವ ಶೈಲಿಯಿಂದಾಗಿ ಈ ಪ್ರವಾಸ ಕಥನಗಳು ಬರೀ ವರದಿಯಾಗದೇ ಪ್ರವಾಸದ ಅನುಭವ ಕಥನವಾಗಿರುವುದು ಇಲ್ಲಿನ ವಿಶೇಷ. ಪ್ರವಾಸವನ್ನು ಹವ್ಯಾಸದ ಗೀಳಾಗಿ ಸ್ವೀಕರಿಸಿರುವ ಇಲ್ಲಿನ ಲೇಖಕರೆ ಆ ಪ್ರವಾಸಗಳ ಅನುಭವ ಸ್ಮೃತಿಯಿಂದ ಮಾಸಿ ಹೋಗುವ ಮುನ್ನ ತಾವು ಹೋದ ಪ್ರವಾಸದ ಭೌಗೋಳಿಕ ವಿವರಗಳು, ಚಾರಿತ್ರಿಕ ಹಿನ್ನೆಲೆ, ಸಾಹಿತ್ಯಿಕ ಸಾಂಸ್ಕೃತಿಕ ವಿವರಗಳನ್ನು ಕಟ್ಟಿಕೊಡುತ್ತಾರೆ. ಹೀಗಾಗಿ ಪ್ರವಾಸ ಕಥನ

ಆಕರ್ಷಕವಾಗಿರುವುದನ್ನು ಲಕ್ಷಿಸುತ್ತವೆ. ಇಲ್ಲಿನ ವಿವರಗಳಲ್ಲಿ ಲೇಖಕರ ವ್ಯಕ್ತಿತ್ವವೇ ಅನಾವರಣಗೊಳ್ಳುತ್ತದೆ. ಓರ್ವ ಆಡಳಿತದ ಹಿರಿಯ ಅಧಿಕಾರಿಗಳಾಗಿ ಇತಿಹಾಸದ ಬಗೆಗೆ ಒಲವು ಉಳ್ಳವರಾಗಿ ಸಂಸ್ಕೃತಿ ಪ್ರಿಯರಾಗಿ ಲಕ್ಷಿಸುವ ಸಂಗತಿಗಳು ಓದುಗರಿಗೆ ಪ್ರಿಯವೆನಿಸುತ್ತವೆ. ಆಡಳಿತದ ಅಧಿಕಾರಿಗಳಾಗಿ ಆಡಳಿತದ ಅನೇಕ ವೈಫಲ್ಯಗಳನ್ನು ಎತ್ತಿ ತೋರಿಸುತ್ತಾರೆ. ತಮ್ಮ ಸರಳ ಬದುಕು ಉದಾತ್ತ ಚಿಂತನೆ, ಸಮಾಜಮುಖಿ ಆಲೋಚನೆ ಜೊತೆಗೆ, ಸಾಮಾಜಿಕ, ರಾಜಕೀಯ ದೈನಂದಿನ ಆಗು ಹೋಗುಗಳ ಬಗೆಗಿನ ಸೂಕ್ಷ್ಮ ಸಂವೇದನೆಗಳನ್ನು ತೀಕ್ಷ್ಣ ನೋಟಗಳನ್ನು ನೀಡುತ್ತಾರೆ. ಅಪಾರ ಅನುಭವ ಆರೋಗ್ಯಪೂರ್ಣ ದೃಷ್ಟಿಕೋನದಿಂದಾಗಿ ಇಲ್ಲಿನ ಪ್ರವಾಸ ಕಥನ ಓದುಗರಿಗೆ ಪ್ರೀಯವಾಗುತ್ತಿದೆ. ಈ ಯಾತ್ರಾಸ್ಥಳಗಳ ಬಗೆಗೆ ಭಾವನಾತ್ಮಕ ಸಂಬಂಧದಲ್ಲಿ ಚಿಂತಿಸುವಂತೆ ಪ್ರೇರೇಪಿಸುತ್ತವೆ. ಓದಿನ ಸುಖವನ್ನು ತಣಿಸುವ ಆಕರ್ಷಕ ಶೈಲಿಯಿಂದಾಗಿ ಕೃತಿ ಸ್ಮೃತಿ ಪಟಲದಲ್ಲಿ ಅಖಂಡಾಗಿ ನಿಲ್ಲುತ್ತದೆ.

ಪ್ರವಾಸ ಹಾಗೂ ಪ್ರವಾಸದ ಬರವಣಿಗೆಯಲ್ಲಿನ ಅಚ್ಚುಕಟ್ಟುತನ ಮತ್ತು ಅನುಭವಿಸಿದ್ದನ್ನು ಅದರ ಎಲ್ಲ ಮೂಲಗಳಿಂದ ಹೇಳಬೇಕೆನ್ನುವ ಲವಲವಿಕೆ ಇಲ್ಲಿದೆ. ಬರಹದಲ್ಲಿನ ಮಾಗಿದ ಪಕ್ವತೆ, ಗಟ್ಟಿತನ ನಿರೂಪಿಸುವ ಶೈಲಿ ಇವು ಚೆನ್ನಾಗಿವೆ.

ಪ್ರವಾಸಿಗರಿಂದಾಗಿಯೇ ಕಠ್ಮಂಡು ಅಥವಾ ನೇಪಾಳ ಜೀವನ ಕಳೆ ಕಟ್ಟುತ್ತಿದೆ. ಹಿಮಾಲಯದ ಮಡಿಲಲ್ಲಿರುವ ನೇಪಾಳದ ಹಿಮಾಲಯವನ್ನೇ ಬಂಡವಾಳ ಮಾಡಿಕೊಂಡು ಬದುಕುತ್ತಿದೆ. ಕಠ್ಮಂಡುವಿನ ಪೇಟೆ ತುಂಬೆಲ್ಲ ಪ್ರವಾಸಿ ನಿಯೋಗ (ಏಜನ್ಸಿ)ಗಳೇ ತುಂಬಿ ತುಳುಕುತ್ತಿವೆ. ಪರ್ವತಾರೋಹಣ, ಜಲಕ್ರೀಡೆಗಳು, ಪ್ರಾಣಿ ಪಕ್ಷಿ ವೀಕ್ಷಣೆ, ಹಿಮಾಲಯದ ವೀಕ್ಷಣೆ, ಹಿಮಕ್ರೀಡೆಗಳು, ಹಿಮಾಲಯದ ಪರಿಸರದಲ್ಲಿ ಚಾರಣ, ಪ್ರಸಿದ್ಧ ಧಾರ್ಮಿಕ ಸ್ಥಳಗಳ ಸಂದರ್ಶನ ಹೀಗೆ ಹತ್ತು ಹಲವಾರು ಬಗೆಯ ಚಟುವಟಿಕೆಗಳೇ ವರ್ಷದುದ್ದಕ್ಕೂ ಪ್ರವಾಸಿಗರನ್ನು ನೇಪಾಳಕ್ಕೆ ಸೆಳೆಯುತ್ತವೆ.

ಶಿವನ ಇಚ್ಚೆ ಇದ್ದರೆ ನಿಮ್ಮ ಕೈಲಾಸಯಾತ್ರೆ ಆದೀತು, ಅವನ ಮೇಲೆ ಭಾರ ಹಾಕಿ ಅನ್ನುವವರೇ ಹೆಚ್ಚು, ಲೇಖಕರಾದರು ಅಂಥ ಹೇಳಿಕೊಳ್ಳುವಂತಹ ಆಸ್ತಿಕರೂ ಅಲ್ಲ. ಇತ್ತ ಪೂರ್ಣ ನಾಸ್ತಿಕರೂ ಅಲ್ಲದ ಮನಃ ಸ್ಥಿತಿಯವರು.

ನೇಪಾಳದ ವಿಶಿಷ್ಟ ಭೌಗೋಳಿಕ ಪರಿಸ್ಥಿತಿಯಿಂದಾಗಿ ಇಲ್ಲಿಯ ಜನ ಸದಾ ನಿಸರ್ಗದೊಂದಿಗೆ ದೈನಂದಿನ ಬದುಕಿಗಾಗಿ ಹೋರಾಡುತ್ತಲೇ ಬಂದಿದ್ದಾರೆ. ಸಾಕಷ್ಟು ಸ್ಥಳದಲ್ಲಿ ಗುಡ್ಡ ಬೆಟ್ಟಗಳನ್ನು ಅಬೇಚನೂರ ವಸತಿ ನಿರ್ಮಿಸಿಕೊಂಡಿದ್ದಾರೆ. ಇಡೀ ಪ್ರದೇಶ

ಎತ್ತನೋಡಿದತ್ತ ಹಿಂಜಿದ ಅರಳಿ ಹರಡಿದಂತೆ ಬಿಳಿಮೋಡಗಳ ಹಾಸಿಗೆ ಹಾಸಿದಂತೆ ಕಾಣುತ್ತಿತ್ತು.

ಮೌಂಟ ಎವೆರೆಸ್ಟ್ ಶಿಖರವನ್ನು ನೇಪಾಳಿಯನ್ನರು 'ಸಾಗರಮಾತೆ' ಎಂದು, ಟಿಬೇಟಿಯನ್ನರು ಇದನ್ನು 'ಚೋಮೋಲುಂಗ್ಮಾ' ಎಂದು ಕರೆಯುತ್ತಾರೆ, ಭಾರತೀಯರು 'ಗೌರಿಶಂಕರ' ಎಂದು ಕರೆಯುತ್ತಾರೆ. ಆದರೆ "ಮೌಂಟ ಎವೆರೆಸ್ಟ್‌ನ ಭೂ ಮಾಪನಕ್ಕೂ ಕಾರಣವಾದ ಸರ್ ಜಾರ್ಜ-ಎವ್ವರೆಸ್ಟಿನಿಂದ" ಎಷ್ಟೋ ಸಲ ವಿಚಿತ್ರ ಎನ್ನುವಂತೆ ಶಿವ ಇಂಥ ಸಾನಿಧ್ಯದಲ್ಲಿ ಏಕೆ ನೆಲೆ ನಿಂತ? ಜಗದ ಸೌಂದರ್ಯವೆಲ್ಲ ನಿನಗಿರಲಿ ಮನುಜ ನನಗೆ ಇದೇ ಸಾಕು ಎಂತಲೋ ಬಲ್ಲವರಾರು?

ಒಂದು ಕಾಲಕ್ಕೆ ಕೈಲಾಸ-ಮಾನಸ ಸರೋವರಗಳು ಹಿಂದುಸ್ತಾನದ ಭಾಗಗಳಾಗಿರಬಹುದು. ಅಂತೆಯೇ ಅವು ಹಿಂದೂ ಪುರಾಣ, ಪುಣ್ಯಕಥೆಗಳು, ಮಹಾಕಾವ್ಯಗಳೊಂದಿಗೆ ಬೆಸೆದುಕೊಂಡಿವೆ. ಕೈಲಾಸ ಮಾನಸ ಸರೋವರ ಯಾತ್ರೆಯನ್ನು ಹಿಂದೂಗಳು 'ಯಾತ್ರೆಗಳ ಯಾತ್ರೆ' ಎಂದು ಭಾವಿಸುವುದುಂಟು.

ಸ್ವಾನುಭಾವದಿಂದ ಪಕ್ವಗೊಂಡ ಅನುಭವ ಮಾತುಗಳು, ಸರಳ ಭಾಷೆ ಓದುಗರಿಗೆ ಹಸಿಗೋಡೆಯ ಮೇಲೆ ಹರಳು ನಿಲ್ಲುವಂತಹ ಆಕರ್ಷಕ ಶೈಲಿಯಿಂದಾಗಿ ಓದುಗರ ಸ್ಮೃತಿಯಲ್ಲಿ ಪ್ರವಾಸ ಕಥನದ ಓದಿನ ಸುಖ ನಿಲ್ಲುತ್ತದೆ. ಅಲ್ಲದೆ ಸರಳ ಹಾಗೂ ಗಂಭೀರ ಸ್ವಭಾವದ ವೆಂಕಟೇಶ ಮಾಚಕನೂರ ಅವರ ನವಿರಾದ ಹಾಸ್ಯ ಶೈಲಿಯು ನಿರೂಪಣೆಗೆ ಕಳಸವಿಟ್ಟಂತಾಗಿದೆ. ಯಾತ್ರೆಯಲ್ಲಿ ವಯಸ್ಕರರು ಮೇಲಿಂದ ಮೇಲೆ ಎದ್ದು ವಿಸರ್ಜನೆ ಮತ್ತೊಂದಕ್ಕೆ ಹೊರ ಹೋಗುವಾಗ ಬಾಗಿಲು ತೆರೆದರೆ ಕುಳಿರ್ಗಾಳಿ ಭರ್ರೆಂದು ಬಂದು ಪ್ರವಾಸಿಗರನ್ನ ತಿವಿಯುತ್ತಿತ್ತು, ಇನ್ನು ಹನ್ನೆರಡು ಜನ ರಾತ್ರಿ ತಮ್ಮ ಶರೀರದ ವಿವಿಧ ಭಾಗಗಳಿಂದ ಹೊರಡಿಸುತ್ತಿದ್ದ ನಾನಾ ಬಗೆಯ ಧ್ವನಿಗಳು ಲೇಖಕರನ್ನು ದೃತಿಗೆಡಿಸಿದ್ದವು. ಲೇಖಕರ ವಿನೋದಮಯವಾದ ಟೀಕೆ ಟಿಪ್ಪಣಿಗಳು, ನಾಡು ನುಡಿ ಸಂಸ್ಕೃತಿ ಬಗೆಗಿನ ಕಾಳಜಿ, ಒಮ್ಮೊಮ್ಮೆ ಗಂಭೀರವಾಗಿ, ಒಮ್ಮೊಮ್ಮೆ ವಿಷಾದದ ಅಂಶವಾಗಿ ಈ ಪ್ರವಾಸ ಕಥನದ ವಿನ್ಯಾಸವನ್ನು ರೂಪಿಸುತ್ತವೆ.

ದೇಶ ವಿದೇಶ ಪ್ರವಾಸ ಮಾಡಿ ಬಂದವರು ಸಾವಿರಾರು ಜನ ಸಿಕ್ಕರೆ ಅದರಲ್ಲಿ ಪ್ರವಾಸಮಾಡಿ ಅದರ ಅನುಭವ ಮತ್ತೊಬ್ಬರಿಗೆ ತಿಳಿಸದೆ ಹಾಗೆ ಇದ್ದವರು, ತಿಳಿಸದೆ ಹೋದವರು ನೂರಾರು ಜನ. ಇದರಲ್ಲಿ ಪ್ರವಾಸಮಾಡಿ ಅಪೂರ್ವ ಅನುಭವ ಸಂಪತ್ತನ್ನು ಶಬ್ದದ ಮೂಲಕ ಗ್ರಂಥದಲ್ಲಿ ಹರಿಸಿ ಓದುಗರನ್ನು ತಣಿಸಿದ ಲೇಖಕರು ಕೆಲವರಿದ್ದಾರೆ. ಇಂಥವರ ಮಾಲಿಕೆಯಲ್ಲಿ ವೆಂಕಟೇಶ ಮಾಚಕನೂರರು ಒಬ್ಬರು. ಯಾವುದೇ ಕಾರಣಕ್ಕಾಗಿ

ಪ್ರವಾಸ ಮಾಡಲು ಸಾಧ್ಯವಿಲ್ಲದ ಕೋಟ್ಯಂತರ ಓದುಗ ಸಮುದಾಯಕ್ಕೆ ದೇಶ-ವಿದೇಶದ ಯಾತ್ರೆ ಸುಖವನ್ನು ಹಣಿಸುವ ಈ ಕಾರ್ಯ ಅಭಿನಂದನೀಯ, ಹಾಗೆ ನಮ್ಮ ನಾಡಿನಲ್ಲಿ ಒಂದು ನಂಬಿಕೆ ಇದೆ. ಕಾಶಿ, ಮಥುರಾ, ರಾಮೇಶ್ವರ, ಕೈಲಾಸ ಮಾನಸ ಸರೋವರ, ಪಂಡರಾಪೂರ, ಧರ್ಮಸ್ಥಳ ಇತ್ಯಾದಿ ಪುಣ್ಯಸ್ಥಳಗಳ ದರ್ಶನ ಮಾಡಿ ಬಂದವರೇ ಸಾಕ್ಷಾತ್ ದೇವ ಸ್ವರೂಪರು. ಅವರ ಪಾದ ತೊಳೆದು ನಮಸ್ಕರಿಸಿದರೆ ಅವರಿಗೆ ದೊರೆತ ಪುಣ್ಯದಲ್ಲಿ ಕೊಂಚ ಭಾಗ ನಮಗೂ ಸಿಗುತ್ತದೆ ಎಂಬುದು, ಹಾಗೆ ಕೈಲಾಸ ಮಾನಸಕ್ಕೆ ಓದುಗರನ್ನು ತಮ್ಮೊಡನೆ ಕರೆದುಕೊಂಡು ಹೋಗಿ ಬರುವ ಇಲ್ಲಿನ ನಿರೂಪಕರು, ತಾವು ಸ್ವತಃ ನೋಡಿದಾಗ ಆದ ಅನುಭೂತಿಯನ್ನು ಓದುಗರಲ್ಲಿ ಉಂಟಾಗುವಂತೆ ನಿರೂಪಿಸಿರುವುದು ಇವರ ಪ್ರವಾಸ ಕಥನದ ಅನನ್ಯತೆ. ಎಲ್ಲ ವಯೋಮಾನದವರು ಓದಿ ಸುಖಿಸುವ ಹಾಗೆ ಇವರ ಪ್ರವಾಸ ಕೃತಿಗಳು ಸಫಲವಾಗುವವು, ಇಂಥ ಅಪರೂಪದ ಪ್ರವಾಸ ಕಥನ ಕೈಲಾಸ ಮಾನಸ.

ಈ ಪ್ರವಾಸ ಕಥನದಲ್ಲಿ ಮೆಚ್ಚುಗೆಯ ಅಂಶವೆಂದರೆ ಲೇಖಕರ ಜಿಜ್ಞಾಸೆಯ ಮಿಮಾಂಸೆ, ಧರ್ಮ, ದೇವರು, ನಿಸರ್ಗ, ಜೀವನ ಮತ್ತು ಮನಸ್ಸುಗಳ ಕುರಿತ ಜಿಜ್ಞಾಸೆ ಕೃತಿಗೆ ಸಾರ್ಥಕತೆಯ ಪ್ರಮಾಣ ಪತ್ರ ನೀಡುತ್ತದೆ. ಆಡಳಿತ ವಲಯದಿಂದ ಸಾರಸ್ವತ ವಲಯದತ್ತ ಮಾಚಕನೂರರ ವ್ಯಕ್ತಿತ್ವವನ್ನು ವಿಸ್ತರಿಸಿದ್ದೇ ಈ ಜಿಜ್ಞಾಸೆ, ಮೊದಲೆರಡು ಪ್ರವಾಸಕಥನಗಳಲ್ಲಿ ಕಾಣಲಾಗದ ಜಿಜ್ಞಾಸೆ ಇಲ್ಲಿ ಐಮುಖಗಳಲ್ಲಿ ಮೂಡಿ ನಿಲ್ಲುವುದು ಆಶ್ಚರ್ಯ. ಇದು ಅರಿವಿನ ಪರಿ ಪ್ರಾಯಶಃ ಇದು ಕೈಲಾಸದ ಪ್ರಭಾವ ಪರಿಕ್ರಮದ ಪರಿಣಾಮ. ಕೈಲಾಸ ಪರಿಕ್ರಮದ ಹನ್ನೊಂದನೆ ದಿನದ ನೂರಾರು ಧರ್ಮ-ದೇವರ ಹೆಸರಿನಲ್ಲಿ ಹೆಚ್ಚುತ್ತಿರುವ ಹಿಂಸೆ-ಕ್ರೌರ್ಯ, ಸಾವು ನೋವು, ಸ್ಫೋಟ-ಯುದ್ಧಗಳ ಆತಂಕಗಳು ದೇವರು-ಧರ್ಮಗಳಿಲ್ಲದ ಕೇವಲ ಮಾನವೀಯ ಮೌಲ್ಯಗಳ ಒಂದು ವ್ಯವಸ್ಥೆಯ ಸಂಭಾವ್ಯತೆಯ ಚಿಂತನೆಗೆ ಕಾರಣವಾಗುತ್ತವೆ. ಮನುಷ್ಯರ ಮನಸ್ಸುಗಳು ಬದಲಾಗದ ಹೊರತು ಆ ಆತಂಕಗಳು ತಪ್ಪುವುದಿಲ್ಲ ಎನ್ನುತ್ತಾರೆ.

ಕೈಲಾಸಕ್ಕೆ ಹೋಗಿ ಸೃಷ್ಟಿಯ ವಿಸ್ಮಯವನ್ನು ಅರಿಯದಿದ್ದರೆ ಯಾತ್ರೆ ನಿರರ್ಥಕವೇ ಸರಿ. ಸೃಷ್ಟಿಯ ವಿಸ್ಮಯಗಳು ಸೃಷ್ಟಿಕರ್ತನ ಪರಿಕಲ್ಪನೆಗೆ ಮೂಲವೆಂಬುದು ಲೇಖಕರ ಅಭಿಮತ. ಮಾನಸ ಸರೋವರ ಹಲವು ಶ್ರೋತಗಳಿಂದ ಹರಿದು ಬರುವ ಜಲರಾಶಿಯನ್ನು ತನ್ನೊಡಲೊಳಗೆ ತುಂಬಿಕೊಳ್ಳುವುದೇ ಹೊರತು ಹೊರಗೆ ಹರಿಬಿಡುವುದಿಲ್ಲ. ಸೃಷ್ಟಿಯ ವೈಚಿತ್ರ್ಯವೇ ಒಂದು ಬೆಡಗು. ಮಾನಸ ಸರೋವರದ ನೀರ ಮೇಲೆ ಮನೆಯ ಮಾಡಿ ಸ್ಥಿತಪ್ರಜ್ಞ ಭಂಗಿಯಲ್ಲಿ ಕುಳಿತ ನೀರುಗೋಳಿ ನೋಡದಿದ್ದರೆ, ಮಾಚಕನೂರರ 'ಕೈಲಾಸ

ಮಾನಸ' ಪೂರ್ಣಗೊಳ್ಳುವುದಿಲ್ಲ, ಇಲ್ಲಿ ಕಸಕಡ್ಡಿ ಕೂಡಿಹಾಕಿ ನೀರ ಮೇಲೆ ಮನೆಮಾಡಿಕೊಂಡಿತ್ತು, ಒಂದು ನೀರಗೋಳಿ ಅದರ ಮೇಲೆ ಮೊಟ್ಟೆ ಇಟ್ಟು ಕಾವು ಕೊಡುತಿತ್ತು, ಕೆಳಗೆ ಹಿಮನೀರು ಮೇಲೆ ಮರಗುಟ್ಟುವ ಚಳಿ. ಆ ಚಳಿ ನೀರಿನಲ್ಲಿ ಮೊಟ್ಟೆಗೆ ಕಾವು ನೀಡುವ ಕೋಳಿಯ ಮೈಶಾಖ; ಸೃಷ್ಟಿಗಾಗಿ ಸೃಷ್ಟಿಯ ಧ್ಯಾನ; ಸೃಷ್ಟಿಯ ವಿಸ್ಮಯಲೋಕ.

ಲೇಖಕರ ಅಭಿರುಚಿ, ಆಸಕ್ತಿ, ವೈಚಾರಿಕ ಚಿಂತನೆಗಳು ಕೃತಿಯನ್ನು ಸಮಕಾಲೀನ ಸಂವಾದಕ್ಕೆ ಹೆಚ್ಚು ಪ್ರಸ್ತುತಗೊಳಿಸುತ್ತವೆ. ಕೈಲಾಸ ಪರಿಸರದ ಜನಜೀವನ ಬಗ್ಗೆ ಬರೆಯುವಾಗಿ ಅಪ್ಪಟ ಸಮಾಜ ವಿಜ್ಞಾನಿಯಾಗುತ್ತಾರೆ, ಕೈಲಾಸ ಹೆಸರಿಗೆ ಮಾತ್ರ ದೇವಲೋಕ ; ಜನರು ಮಾತ್ರ ಕಡುಬಡವರು, ಸಣ್ಣವರು, ದೊಡ್ಡವರೆನ್ನದೆ ಎಲ್ಲರೂ ಯಾತ್ರಿಕರ ಮುಂದೆ ಕೈಯೊಡ್ಡಿ ಭಿಕ್ಷೆ ಬೇಡುತ್ತಾರೆ. ಅವರು ಕುಡುಕರು, ಮಾಂಸಾಹಾರಿಗಳು, ಸ್ನಾನ ಮಾಡದ ಕೊಳಕರು. ಆದರೆ ನಮ್ಮಂತೆ ಆಶೆಬುರುಕರಲ್ಲ ಹಿಮಾಲಯದೊಂದಿಗೆ ರಾಜಿಮಾಡಿಕೊಂಡ ದೈನಂದಿನ ಬದುಕು ಅವರದು ಯಾಕ್ ಅವರ ಕಾಮಧೇನು; ಯಾತ್ರಿಕರೇ ಅವರಿಗೆ ಕಲ್ಪವೃಕ್ಷ ಕೈಲಾಸ ಯಾತ್ರಿಯ ಭಾವುಕತೆಯಲ್ಲಿಯೂ ಅಲ್ಲಿಯ ಜನರ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವ ಶಕ್ತಿ ಮಾಚಕನೂರ ಅವರಲ್ಲಿರುವುದರಿಂದಲೇ ಕೃತಿ ಯಮದ್ವಾರವನ್ನು ಪಾರುಮಾಡುತ್ತದೆ. ಈ ಪಂಚ ಜಿಜ್ಞಾಸೆಗಳಲ್ಲದ್ದಿದ್ದರೆ ಅದು ಕಾಲದಲ್ಲಿ ಕಳೆದು ಹೋಗುತ್ತಿತ್ತು.

ತಿಳಿಯಾದ ಹಾಸ್ಯದ ಎಳೆಯೊಂದು ಪ್ರವಾಸ ಕಥನದುದ್ದಕ್ಕೂ ಅಂದರೆ ಬೆಂಗಳೂರಿನಿಂದ ಕೈಲಾಸದವರೆಗೂ ಸುತ್ತಿಕೊಂಡಿದೆ. ಯಾವಾಗಲೂ ಗಂಭೀರವಾಗಿ ಕಾಣುವ ತುಟಿಬಿಚ್ಚಿ ನಗದ, ಆಡಳಿತದ ಶಿಸ್ತು ಸಡಿಲಗೊಳ್ಳಿಸದಂತೆ ವ್ಯವಹರಿಸುವ ಮಾಚಕನೂರರ ಒಳಗಿನ ಒಬ್ಬ ವಿದೂಷಕ ಕೈಲಾಸದಲ್ಲಿ ಕಾಣಿಸಿಕೊಳ್ಳುತ್ತಾನೆ. ತನ್ನ ನವಿರಾದ ಹಾಸ್ಯದ ಮೂಲಕ ನಮ್ಮ ತುಟಿಗಳಿಗೆ ನಗು ಮೂಡಿಸುತ್ತಾನೆ. ಅದು ನೈಜ ಹಾಸ್ಯ ಇದು ಉತ್ತಮ ಪುರುಷಾರ್ಥ ಲಕ್ಷಣವೆಂದು ಭರತ ಹೇಳುವನು. ಲೇಖಕರ ಹಾಸ್ಯದ ಮೊನಚು ತುಂಬಾ ತೀಕ್ಷ್ಣವಾದುದು, ಒಮ್ಮೊಮ್ಮೆ ಅದರ ಗೆರೆ ಕೂಡಾ ಕಾಣುವುದಿಲ್ಲ ಅವರ Passport ಮೇಲಿನ Cancelled ಮುದ್ರೆಯಂತೆ Swipe (ಹೃದಯದಲ್ಲಿ ಹಾಕಿ ಎಳೆ) ಮಾಡಿದಾಗಲೇ ಅಲ್ಲಿಯ ಹಾಸ್ಯ ತಿಳಿಯೊಡೆಯುವುದು. ಅವರ ಗೆಳೆಯ ಕೈಲಾಸ ಯಾತ್ರಿಯ ಸಂಗಾತಿ ಬಿ.ಡಿ.ಪಾಟೀಲರ ಜೊತೆಯಲ್ಲಿ ತಳಕುಹಾಕಿ ಕಥನದ ಲವಲವಿಕೆಗೆ ತಂತ್ರವನ್ನು ರೂಪಿಸುತ್ತದೆ.

"ಪಾಟೀಲರ ಬ್ಯಾಗ್ ಜಿಪ್ಪು ಅತ್ತಿಂದಿತ್ತ ಇತ್ತಿಂದತ್ತಾ ಸರಸರ ಹರಿಯುವ ಶಬ್ದ ಕೈಲಾಸದ ಕಥನ ಮುಗಿದರೂ ಕೇಳುತ್ತಲೇ ಇರುತ್ತದೆ. ಯಾತ್ರಾ ದಂಪತಿಗಳ ಗೊಣಗಾಟ

ಕರಗುವುದೇ ಇಲ್ಲ, ಗಂಡ ಹೆಂಡತಿಯಿಂದ ಅಗಲಲಿಚ್ಚಿಸದೆ ರಾತ್ರಿ ತಮಗೊಂದು ಪ್ರತ್ಯೇಕ ಕೊಠಡಿ ಕೇಳಿ ಯಾತ್ರಾ ವ್ಯವಸ್ಥಾಪಕರೊಂದಿಗೆ ಜಗಳಕ್ಕಿಳಿದರೆ ಇಲ್ಲಿಯೂ ತನ್ನನ್ನು ನೆಮ್ಮದಿಯಿಂದ ಇರಲು ಬಿಡುತ್ತಿಲ್ಲವಲ್ಲ ಎಂಬ ಕಷ್ಟ ಹೆಂಡತಿಯರದು. ಆ ಸಂದರ್ಭದಲ್ಲಿ ಲೇಖಕರು ಹೊಸದೊಂದು ಗಾದೆಯನ್ನೇ ಹೊಸೆಯುತ್ತಾರೆ, “ಮಹಿಳೆಯರಿಗೆ ಮಾತನಾಡಲು ಯಾರಾದರೂ ಸಿಕ್ಕರೆ ಸ್ವಂತನಾಥನೂ ಬೇಡ. ಆ ಕೈಲಾಸನಾಥನೂ ಬೇಡ” ಮೋಬೈಲ ಕಮೋಡ ಆಫರ್ ಹೊಲಿದ ತುಟಿಗಳಿದ್ದರೂ ಬಿಡಿಸುತ್ತದೆ. ಮಾಚಕನೂರರ ಈ ವೈನೋದಿಕತೆ ಕೆ.ಪಿ. ತೇಜಸ್ವಿಯವರನ್ನು ನೆನಪಿಸುತ್ತದೆ”.

ವೆಂಕಟೇಶ ಮಾಚಕನೂರರು ಒಬ್ಬ ಅಧಿಕಾರಿ, ಅಧಿಕಾರಿಯ ಸುತ್ತ ಸರಕಾರಿ ವ್ಯವಸ್ಥೆ ಒಂದು ಮುಳ್ಳು ಬೇಲಿ ಇರುತ್ತದೆ. ಅದು ಅಧಿಕಾರದಿಂದ ಜನ ಸಾಮಾನ್ಯರನ್ನು ಬೇರ್ಪಡಿಸುತ್ತದೆ. ಆದರೆ ಮಾಚಕನೂರರ ಸಾಹಿತ್ಯ, ಅವರ ಸುತ್ತಲಿನ ಮುಳ್ಳು ಬೇಲಿ ಕಿತ್ತೊಗೆದು ಸಹೃದಯರನ್ನು ಕೈಬೀಸಿ ಕರೆಯುತ್ತದೆ. ಇದುವೇ ಸಾಹಿತ್ಯದ ಸಾರ್ಥಕತೆ. ಇದನ್ನು ಅತ್ಯಂತ ವ್ಯವಸ್ಥಿತವಾಗಿ ಹಾರೂಗೇರಿಯ ಸಂಶೋಧನಾ ಕೇಂದ್ರದ ನಿರ್ದೇಶಕರಾದ ಡಾ. ವ್ಹಿ. ಎಸ್. ಮಾಳಿಯವರು ವಿಶ್ಲೇಷಣೆ ಮಾಡಿರುವರು.

ಮಾಚಕನೂರರ ಮೂರನೇ ಪ್ರವಾಸ ಕಥನ ಕೈಲಾಸ–ಮಾನಸ. ಮೊದಲೆರಡು ಕೃತಿಗಳು ವಿದೇಶ ಪ್ರವಾಸ ಕುರಿತಾಗಿದ್ದರೆ. ಈ ಪ್ರವಾಸ ಕಥನವು ನಮ್ಮ ದೇಶದ ಪ್ರಸಿದ್ಧ ಯಾತ್ರಾ ಸ್ಥಳವಾಗಿರುವ ಭಾರತೀಯರ ಪೂಜ್ಯನೀಯ ಸ್ಥಾನವಾಗಿರುವ ಶಿವನ ಆವಾಸ ಸ್ಥಾನವೆಂದು ಭಾವಿಸುವ ಹಿಮಾಲಯ ಪರಿಸರದಲ್ಲಿರುವ ಪ್ರಸಿದ್ಧ ಸ್ಥಳವೇ ‘ಕೈಲಾಸ–ಮಾನಸ’ ಎಂಬ ಪ್ರದೇಶ. ಭಾರತೀಯ ಆಸ್ತಿಕರ ಪಾಲಿಗೆ ಸ್ವರ್ಗವೆಂದು ಕರೆಯಲ್ಪಡುವ ಈ ಸ್ಥಳದ ಕುರಿತು ಲೇಖಕರು ಪ್ರವಾಸ ಕಥನದ ಮೂಲಕ ಪರಿಚಯಿಸುತ್ತಾರೆ.

ಪ್ರವಾಸಿಗರಿಗೆ ಒಳ್ಳೆಯ ಕಣ್ಣು, ಒಳ್ಳೆಯ ಮನಸ್ಸು, ಒಳ್ಳೆಯ ಹೃದಯ ಇದ್ದು ಆಸ್ವಾದಿಸುವ ಸಾಮರ್ಥ್ಯವಿರಬೇಕು. ಉತ್ಸುಕತೆ, ಜಿಜ್ಞಾಸೆ, ಕಷ್ಟ ಸಹಿಷ್ಣತೆ, ಅಸಾಧಾರಣವಾದ ನಿರಂತರ ಅನ್ವೇಷಣೆ ಇರಬೇಕು. ಇಂತಹ ವಿಶಿಷ್ಟ ದೃಷ್ಟಿಕೋನವಿರುವುದನ್ನು ಮಾಚಕನೂರರ ‘ಕೈಲಾಸ–ಮಾನಸ’ ಕೃತಿಯಲ್ಲಿ ಕಾಣುತ್ತೇವೆ.

ಈ ಪ್ರವಾಸವು ನಾನಾ ಆಶಯ ಮತ್ತು ಉದ್ದೇಶಗಳಿಂದ ಪ್ರಾರಂಭವಾದರೂ ಅವುಗಳ ಹಿಂದಿನ ಪ್ರೇರಣೆ, ಮನಸ್ಸಿನ ಮತ್ತು ಸಮಾಜದ ಪ್ರಚಲಿತ ನಂಬುಗೆಗಳ ಶೋಧನೆಯೇ ಆಗಿದೆ.

## ೨.೩ ಸದ್ದು! ದೇವರು ಸ್ನಾನ ಮಾಡುತ್ತಿದ್ದಾರೆ.

ಇದು ಕೆ. ಸತ್ಯನಾರಾಯಣರ ಕೈಲಾಸ–ಮಾನಸ ಪ್ರವಾಸಾನುಭವ ಕಥನ ಇದರ ಮೊದಲನೆಯ ಭಾಗ "ನಾನು ತಳ್ಳಿದ ಚೀನಾ ಬಂಡಿ".

ಮನುಷ್ಯ ಎಂದ ಮೇಲೆ ಬೇಸರ ಬರುವುದು ಸಹಜ. ನಮಗೆ ಬೇಸರವಾದಾಗ ಸ್ನೇಹಿತರ ಜೊತೆಗೆ ಆಗಲಿ, ಇನ್ನಿತರರ ಜೊತೆ ಪ್ರಶಾಂತವಾದ ಸ್ಥಳಗಳಿಗೆ ಹೋಗುವುದು ಸಹಜವಾಗಿದೆ. ಪ್ರವಾಸಕ್ಕೆ ಹೋಗಿದ್ದ ಕೆ.ಸತ್ಯನಾರಾಯಣರವರು ಬೇಸರವನ್ನು ಮರೆಯಲು ಚೀನಾದ ತಕಲ್‌ಕೋಟೆಯ ಅತಿಥಿಗೃಹದ ರಸ್ತೆಯಿಂದ ಸ್ವಲ್ಪ ಮುಂದೆ ಬಂದು ನಿಂತರು. ಆ ಸಂಜೆ ಅಂದರೆ ಒಂದು ದೇಶದಲ್ಲಿದ್ದ ಸಂಸ್ಕೃತಿಯಾಗಲಿ, ನಡೆನುಡಿಯಾಗಲಿ, ಜನಾಂಗವಾಗಲಿ, ವಾತಾವರಣವಾಗಿರಲಿ ಇನ್ನೊಂದು ದೇಶಕ್ಕೆ ಅನ್ವಯವಾಗಿರುವುದಿಲ್ಲವೆಂಬುದು ಖಚಿತ. ಹಾಗೆಯೆ ಚೀನಾ ಮತ್ತು ಭಾರತಕ್ಕೆ ಅಜಗಜಾಂತರ ವ್ಯತ್ಯಾಸವಿದೆ. ಅಲ್ಲಿಯ ವಾಹನ, ಪಟ್ಟಣ, ಬೇರೆ ರೀತಿಯಲ್ಲಿಯೇ ಇದ್ದವು. ಅಲ್ಲಿರುವ ಹಿಮಪರ್ವತ ಶ್ರೇಣಿಗಳು ಸಂಜೆಯ ಬಿಸಿಲಿನಲ್ಲಿ ಬೆಳ್ಳಿಯ ಪರ್ವತಶ್ರೇಣಿಗಳಂತೆ ಕಾಣುತ್ತಾ ಕಾಲದ ಕೃತಕ ವಿಭಜನೆಯ ಬಗ್ಗೆ ಲೇಖಕರು ಅನುಭವಿಸುತ್ತಿದ್ದ ಗೊಂದಲಕ್ಕೆ ಸಾಕ್ಷಿಯಂತೆ ನಿಂತಿದ್ದವು. ಈ ಹಿಮ ಪರ್ವತ ಶ್ರೇಣಿಗಳು ಪ್ರವಾಸಿಗರಿಗೆ ಆನಂದವನ್ನುಂಟು ಮಾಡುವ ಚೀನಾದ ಒಂದು ತಾಣವಾಗಿದ್ದವು.

ಆಗ ಅವರ ಕಣ್ಣಿಗೆ ಬಿದ್ದದ್ದು ಚೀನಾ ಬಂಡಿ, ಅದು ಕೆಟ್ಟ ಶಬ್ದ ಮಾಡುವ ವಾಹನ ಲೇಖಕರ ಮುಂದೆ ಬಂದು ನಿಂತಿತು. ಅದನ್ನು ಕಂಡು ಲೇಖಕರಿಗೆ ಆಶ್ಚರ್ಯ. ಆದರೆ ಅಲ್ಲಿಯವರಿಗೆ ಇದು ಸಾಮಾನ್ಯವಾಗಿತ್ತು. ಆದರೆ ಇವರಿಗೆ ಕುತೂಹಲ ಪ್ರಾರಂಭವಾಯಿತು. ಅದನ್ನು ತಳ್ಳಲು ಸಹಾಯಮಾಡಿದರೂ ಇವರಿಗೆ ಧನ್ಯವಾದಗಳನ್ನು ತಿಳಿಸಲಿಲ್ಲ. ಆದರೆ ಎಷ್ಟು ತಳ್ಳಿದರು ಅದು ಚಲಿಸಲು ಆಗಲೇ ಇಲ್ಲ. ಮನುಷ್ಯ ಸತ್ತರೂ ನಾಲ್ಕು ಜನ ಬೇಕು. ಆದರೆ ಈ ಬಂಡಿಯನ್ನು ಅಂದರೆ ಕೆಟ್ಟ ಬಂಡಿಯನ್ನು ತಳ್ಳಲು ಹತ್ತಾರು ಜನರ ಸೇವೆ ಅದೂ ಅಂತರ್ ರಾಷ್ಟ್ರೀಯ ಸ್ವರೂಪದ್ದು ಎಂದು ಹೇಳುತ್ತಾರೆ.

ಇಷ್ಟೆಲ್ಲಾ ತೊಂದರೆ ತಿಳಿವಳಿಕೆಗೆ ಕಾರಣವಾದ ಆ ಬಂಡಿ ಅಥವಾ 'ಟ್ರಕ್'ಗೆ ನೋಂದಣಿ ಸಂಖ್ಯೆಯೇ ಇರಲಿಲ್ಲ. ಇನ್ನೂ ಅದು ಯಾವ ಬಣ್ಣ ಎಂದು ತಿಳಿಯದು. ಅಷ್ಟು ವಿಚಿತ್ರವೆಂದು ಹೇಳಬಹುದು. ಆ ಬಂಡಿ ಲೇಖಕರಿಗೆ ಮತ್ತೆ ಕಾಣಲಿಲ್ಲ. ಈ ಬಂಡಿ ಚೀನಾ ದೇಶದ ರೂಪಕವೆಂಬಂತಿತ್ತು.

ಮಹಾಕವಿ ಏಟ್ಸ ಮತ್ತು ಅವನ ಕವನಗಳನ್ನು ತೀವ್ರವಾಗಿ ಮೆಚ್ಚಿ ಅನುವಾದಿಸಿದ ಅನಂತಮೂರ್ತಿ ಅಂತಹವರಿಗೆಲ್ಲ ನಮ್ಮ ಸುತ್ತಲ ಬದುಕನ್ನು ಸದ್ದು ಮಾಡುವ ಬಂಡಿಯ

ಜೊತೆಯೇ ವಾಸ್ತವವನ್ನು ಗ್ರಹಿಸುವುದು ಸರಿಯೋ? ಅಥವಾ ಮೇಲೇರುವ ಪಕ್ಷಿಯಂತೆ ಎಲ್ಲರಿಗಿಂತ ಎತ್ತರದಲ್ಲಿ ನಿಂತು ಬದುಕನ್ನು ನೋಡುವುದು ಸರಿಯೋ? ಎಂಬ ಪ್ರಶ್ನೆ ಬಹುಕಾಲ ಕಾಡಿದಂತಿದೆ. ಲೇಖಕರು ತಳ್ಳಿದ ಅಥವಾ ತಳ್ಳಲು ಪ್ರಯತ್ನಿಸಿದ ಚೀನಾ ಬಂಡಿಯನ್ನು ಅವರು ನೋಡಿದ್ದರೆ ಏನು ಹೇಳುತ್ತಿದ್ದರು ಎಂಬ ಕುತೂಹಲ.

ಆಧುನಿಕ ಕಾಲದ ಪೋಲಿಸರು ಮಧ್ಯಮ ವರ್ಗದವರ ಮೇಲೆ ತಮ್ಮ ದಬ್ಬಾಳಿಕೆಯನ್ನು ನಡೆಸುತ್ತಿರುತ್ತಾರೆ. ಇದು ಚೀನಾದ ತಕಲ್‌ಕೋಟೆ ಎಂಬ ಊರಿನಲ್ಲಿ ಪೋಲಿಸರು ಎಂದರೆ ಯಾರು ಎಂದು ಮೊದಲು ತಿಳಿದುಕೊಳ್ಳೋಣ. ಎಸ್ಪಿಗಳಲ್ಲ, ಡಿಐಜಿಗಳಲ್ಲ, ಕಮೀಷನರ್‌ಗಳಲ್ಲ, ಎಜಿಪಿಗಳಲ್ಲ, ಪೋಲಿಸರೆಂದರೆ ಕಾನ್‌ಸ್ಟೇಬಲ್ ಮತ್ತು ಸಬ್ ಇನಸ್ಪೆಕ್ಟರ್‌ಗಳು ಮಾತ್ರವೆಂದು ಅಭಿಪ್ರಾಯ. ಹಾಗೆಯೇ ಚೀನಾದಲ್ಲಿರುವ ಪೋಲಿಸ್‌ರಲ್ಲಿ ಅಧಿಕಾರಿಗಳು ಯಾರು? ಕೆಳಗಿನವರ್‍ಯಾರು? ಎಂದು ತಿಳಿಯಲು ಕಷ್ಟಪಡಬೇಕು. ಏಕೆಂದರೆ ಅಲ್ಲಿ ಪೊಲೀಸರು, ಸೈನಿಕರು, ಗುಮಾಸ್ತರು ಎಲ್ಲರೂ ಹಸಿರು ಬಟ್ಟೆಯನ್ನು ಧರಿಸುತ್ತಾರೆ. ಇದರಲ್ಲಿ ಅಧಿಕಾರಿಯಾರು? ಗುಮಾಸ್ತ ಯಾರು? ಎಂದು ತಿಳಿಯುವುದು ಕಷ್ಟ.

ಚೀನಾದ ತಕಲ್‌ಕೋಟೆಯ ಅತಿಥಿಗೃಹದ ಎದುರು ಪೋಲಿಸ್ ಕೇಂದ್ರವಿತ್ತು. ಪೋಲಿಸ್ ಆವರಣ ಹಚ್ಚ ಹಸಿರಿನಿಂದ ಕೂಡಿತ್ತು, ಅಲ್ಲಿ ಹರಿಯುವ ಒಂದು ತೊರೆ ಇತ್ತು. ಅದು ಅಲ್ಲಿಯ ಪೋಲಿಸ್‌ರ ಕುಟುಂಬಗಳಿಗೆ ಮಾತ್ರ ಹರಿಯುವ ನೀರಿನಂತೆ ಪೋಲಿಸ್‌ರು ಸಹೃದಯಿಗಳು ಆಗಿರುತ್ತಾರೆ ಎಂದು ಲೇಖಕರ ಆಶೆಯಾಗಿತ್ತು. ಅಲ್ಲಿ ವಾಸಿಸುವ ಜನಸಂಖ್ಯೆಗಿಂತ ವಾಹನಗಳೇ ಜಾಸ್ತಿ ಇದ್ದವು. ಚೀನಿಯರಲ್ಲಿ ಆರ್ಥಿಕ ಪರಿಸ್ಥಿತಿಯ ಬಗ್ಗೆ ಅರಿವೇ ಇಲ್ಲವಂತೆ. ಲೇಖಕರು ಬಟ್ಟೆ ತೊಳೆಯಲು ಪೋಲಿಸ್ ಆವರಣದಲ್ಲಿ ಹೋದಾಗ ನಾಲ್ಕಾರು ಕಾನ್‌ಸ್ಟೇಬಲ್‌ಗಳು ಚೌಕ್‌ಬಾರ ಅಥವಾ ಹುಲಿಕಲ್ಲು ಆಟದ ರೀತಿಯ ಆಟವನ್ನು ದುಡ್ಡು ಇಟ್ಟುಕೊಂಡು ಆಡುತ್ತಿದ್ದರು. ಪೋಲಿಸ್‌ರೇ ಈ ರೀತಿಯಾಡಿದರೆ ಪ್ರಜೆಗಳ ರಕ್ಷಣೆ ಹೇಗೆ ಸಾಧ್ಯ. ಲೇಖಕರು ಅಲ್ಲಿ ಬಟ್ಟೆ ತೊಳೆಯಲು ಹೋದಾಗ ಇವರ ಸುತ್ತ ನಿಂತು ವಾಚು ಮತ್ತಿತರ ವಸ್ತುಗಳನ್ನು ನೋಡಿದರು, ಇವರು ಹೆದರಿದರು. ಹೇಗೋ ಬೇಗ ಬೇಗ ಕೆಲಸ ಮುಗಿಸಿಕೊಂಡು ಗೇಟನ ಹೊರಗೆ ಬಂದರು, ಅವರು ಕೈಸನ್ನೆಯಿಂದ ಇವರನ್ನು ಎಲ್ಲಾ ರೀತಿಯಿಂದ ವಿಚಾರಿಸುತ್ತಿದ್ದರು, ಅದು ಏನು ಎಂದು ಇಂದಿಗೂ ಯೋಚಿಸುತ್ತಲೇ ಇದ್ದೇನೆ.

“ಓಂ ಸನ್ನಿಧಿಯಲ್ಲಿ ಓಂ ಅಲ್ಲದ ಮಾಂಟಾಜ್” ಅನ್ನುವ ಪ್ರಸಂಗದಲ್ಲಿ ಓಂ ಪರ್ವತವನ್ನು ಲೇಖಕರು ತಮ್ಮ ಅನುಭವದಲ್ಲಿ ವಿವರಿಸಿದ್ದಾರೆ.

ಕೈಲಾಸ ಮಾನಸ ಸರೋವರಕ್ಕೆ ಹೋಗುವ ಹಾದಿಯಲ್ಲಿ ಭಾರತದ ಕೊನೆಯ ಊರೆಂದರೆ ಲಿಪುಲೆಕ್ ಪಾಸ್. ಇಲ್ಲಿ ಜನವಸತಿಯಿಲ್ಲ, ಕೈಲಾಸ ಮಾನಸ ಸರೋವರದ ಯಾತ್ರೆಯ ಅವಧಿ ಮುಗಿದ ಮೇಲೆ ಈ ಕ್ಯಾಂಪ್ ಮುಕ್ತಾಯವಾಗುತ್ತದೆ.

ಲೇಖಕರು ಪ್ರವಾಸಕ್ಕೆ ಹೋಗುವ ಮುನ್ನ ಕೈಲಾಸ ಮಾನಸ ಸರೋವರ ಕುರಿತು ಮದ್ರಾಸಿನ ಪೋಲಿಸ ಅಧಿಕಾರಿ ಶ್ರೀ ರಾಜಗೋಪಾಲನ್ ತಯಾರಿಸಿದ ವಿಡಿಯೋ ಚಿತ್ರವನ್ನು ಎರಡು-ಮೂರುಸಲ ನೋಡಿದ್ದರು. ಜೀವನದಲ್ಲಿ ನಾವು ಬೇರೊಂದು ಸ್ಥಳಕ್ಕೆ ಹೋಗಬೇಕಾದರೆ ಆ ಸ್ಥಳದ ಅನುಕೂಲ ಮತ್ತು ಅನಾನುಕೂಲದ ಬಗ್ಗೆ ತಿಳಿದುಕೊಳ್ಳುವುದು ಸಹಜವಾಗಿದೆ. ಆ ವಿಡಿಯೋದಲ್ಲಿನ ಚಿತ್ರದ್ದುದ್ದಕ್ಕೂ ಎಸ್.ಪಿ.ಬಾಲಸುಬ್ರಹ್ಮಣ್ಯ ಹಾಡುವ ಶಿವಸ್ತುತಿಯ ಭಜನೆಯಿದೆ, ಸಂಗೀತವಿದೆ. ಬಾಲಸುಬ್ರಹ್ಮಣ್ಯ ಅವರ ಧಾರ್ಮಿಕ ಭಾವನೆ ತುಂಬಿದ ಕಂಠದಲ್ಲಿ ಓಂ ಪರ್ವತ ಲೇಖಕರಿಗೆ ತುಂಬಾ ಆಕರ್ಷಕವಾಗಿ ಕಂಡಿತು. ಓಂ ಪರ್ವತವೇ ಏನು, ಚಿತ್ರದಲ್ಲಿ ಕಾಣುವ ಮೋಡ, ಮಂಜು, ರಭಸದಿಂದ ಹರಿಯುವ ಕಾಳಿನದಿಯ ನೀರು ಇವೆಲ್ಲವೂ ಬಾಲಸುಬ್ರಹ್ಮಣ್ಯರ ಮಧುರವಾದ ಕಂಠದಲ್ಲಿ ಮತ್ತೆ ಹೊಸಜೀವ ತುಂಬುತ್ತಿದೆ.

ಕೈಲಾಸ – ಮಾನಸ ಸರೋವರ ಯಾತ್ರೆ ಮುಗಿಸಿಕೊಂಡು ಬಂದರೆ ಅಲ್ಲಿ ನಯ ವಿನಯ, ಮುಗ್ಧರನ್ನಾಗಿ ಮಾಡುತ್ತದೆ. ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಪ್ರವಾಸಕ್ಕೆ ಹೋದರೂ ಲೇಖಕರು ತಮ್ಮ ಭಾರತೀಯ ಸಂಸ್ಕೃತಿಯನ್ನು ಬಿಟ್ಟಿರಲಿಲ್ಲ. ೧೫ ದಿನಗಳವರೆಗೆ ಉಪ್ಪಿಲ್ಲದ, ಹುಳಿಯಿಲ್ಲದ, ರುಚಿಯಿಲ್ಲದ ಚೀನಿ ಆಹಾರ ತಿಂದು ಲೇಖಕರ ನಾಲಿಗೆ ಕೆಟ್ಟಿತು. ಭಾರತೀಯ ಆಹಾರವೆಂದರೆ ಅಮೃತದ ಸಮಾನವಾಗಿದೆ ಎಂದು ಅವರಿಗೆ ಪ್ರವಾಸದಿಂದ ಹಿಂತಿರುಗಿದಾಗ ಅನುಭವಕ್ಕೆ ಬಂದಿತು. ಅದಕ್ಕೆ ಎಷ್ಟೇ ಕಷ್ಟವಾದರೇನು ನಮ್ಮ ದೇಶ, ಭಾಷೆ, ಉಡುಗೆ, ತೊಡುಗೆ, ಇವೆಲ್ಲಾ ನಮ್ಮದೇ ಮೇಲು ಎಂದು ಹೇಳಲಾಗುತ್ತದೆ. ಅದಕ್ಕಾಗಿಯೇ ಹಿರಿಯರು ಹೇಳುತ್ತಾರೆ 'ಹೆತ್ತ ತಾಯಿ-ಹೊತ್ತ ಭೂಮಿ ಸ್ವರ್ಗಕ್ಕಿಂತಲೂ ಮಿಗಿಲು' ಎಂದು.

ಕೆ.ಸತ್ಯನಾರಾಯಣರವರು ಪ್ರವಾಸಕ್ಕೆ ಹೋಗಿದ್ದಾಗ ಅವರ ತಂಡದ ಜೊತೆ ಇನ್ನೊಂದು ತಂಡ ಹೋಗಿತ್ತು, ಅದರಲ್ಲಿ ಕುಲಕರ್ಣಿಯವರು ಇದ್ದರು, ಲೇಖಕರಿಗೆ ಅವರನ್ನು ಭೇಟಿಯಾಗಬೇಕಿತ್ತು. ಯಾರಾದರು ಬೇರೆ ದೇಶಕ್ಕೆ ಹೋಗಿದ್ದರೆ ಅಲ್ಲಿ ಕನ್ನಡ ಭಾಷೆ, ಉಡುಗೆ-ತೊಡುಗೆಯನ್ನು ಕಂಡರೆ ಅವರಿಗೆ ಸಂತೋಷ ಉಂಟಾಗುತ್ತದೆ, ಅಂದರೆ "ಮರುಳುಗಾಡಿನಲ್ಲಿ ನೀರು ಸಿಕ್ಕಷ್ಟು ಸಂತೋಷವಾಗುತ್ತದೆ". ಹಾಗೆಯೆ ಲೇಖಕರು ಕುಲಕರ್ಣಿಯವರ ತಂಡಕ್ಕೆ ಹೋಗಿದ್ದರು.

ಒಂದೇ ದೇಶದವರು ಯಾವ ದೇಶದಲ್ಲೇ ಸಿಗಲಿ ಕಷ್ಟನಷ್ಟ, ನೋವು ನಲಿವಿನ ಬಗ್ಗೆ ಮಾತನಾಡುವುದು ಸಹಜದ ಮಾತು. ಹಾಗೆಯೆ ಕುಲಕರ್ಣಿಯವರು ಲೇಖಕರಿಗೆ ಆದ ಸಾವು–ನೋವುಗಳ ಬಗ್ಗೆ ಅಂಜುತ್ತಾ ಹೇಳುತ್ತಾರೆ, ಕೈಲಾಸ ಶಿವಲಿಂಗವಿರುವುದು ಸಮುದ್ರದಿಂದ ೨೦–೨೩ ಸಾವಿರ ಅಡಿ ಎತ್ತರದಲ್ಲಿ ದೂರದಿಂದಲೇ ಪೂಜೆ ಪುನಸ್ಕಾರಗಳು ನಡೆಯುತ್ತವೆ. ಕುಲಕರ್ಣಿಯವರು ಎತ್ತರದ ಶಿವಲಿಂಗಕ್ಕೆ ಹೋದಾಗ ಒಂದು ಹೆಜ್ಜೆ ಇಡಲು ಭಯ ಎನ್ನುತ್ತಿದ್ದರು. ಕಾರಣ ಅಲ್ಲಿ ಗಾಳಿ ಇರುವುದಿಲ್ಲ ಮತ್ತು ಹಿಮದಲ್ಲಿ ಹೋಗುವಾಗ ರಕ್ತದೊತ್ತಡ ತುಂಬಾ ಹೆಚ್ಚು, ಮಿದುಳಿನ ಭಾಗವೆಲ್ಲಾ ಕಲ್ಲಿನಂತಾಗಿರುತ್ತದೆ. ಹೃದಯ, ಶ್ವಾಸಕೋಶಗಳು ಹೇಗೆ ಕೆಲಸಮಾಡುತ್ತಿದ್ದವು ಎಂದು ತಿಳಿಯದೇ ಅವರಿಗೆ ಭಯದಿಂದ ಧ್ವನಿ ಕೂಡಾ ಹೊರಗೆ ಬರುತ್ತಿರಲಿಲ್ಲ. ಅಷ್ಟೊಂದು ಆತಂಕವನ್ನು ಹೆಚ್ಚಿಸುತ್ತದೆಂದು ಕುಲಕರ್ಣಿಯವರು ಲೇಖಕರಿಗೆ ಅಪಘಾತವನ್ನು ವರ್ಣಿಸಿದರು.

ಕುಲಕರ್ಣಿಯವರು ಹಲವಾರು ವರ್ಷ ಅಲ್ಲಿ ನಡೆದ ಅಪಘಾತಗಳ ಬಗ್ಗೆ ಮಾಹಿತಿ ಕಲೆ ಹಾಕಿದ್ದರು, ಒಂದೊಂದಾಗಿ ಲೇಖಕರಿಗೆ ವಿವರಿಸುತ್ತಾ ಹೋದರು, ಆದರೆ ಅವರು ಹೇಳಿದ್ದರಲ್ಲಿ ತುಂಬಾ ಉತ್ಪ್ರೇಕ್ಷೆಯೇನೂ ಇರಲಿಲ್ಲ. ಕೈಲಾಸ ಪ್ರವಾಸ ಸುಲಭವಲ್ಲವೆಂಬುದು ಅನಂತ ಸತ್ಯನಾರಾಯಣರ ಅನುಭವಕ್ಕೂ ಬಂತು.

ಗುಂಪಿನಲ್ಲಿರುವುದು, ಗುಂಪು ಕಟ್ಟುವುದು ಮನುಷ್ಯನ ಸಹಜ ಸ್ವಭಾವ. ಒಂಟಿಯಾಗಿರುವುದು, ಏಕಾಂತ ಬಯಸುವುದು ಅವನು ರೂಢಿಸಿಕೊಳ್ಳ ಬೇಕಾದ ಗುಣ. ಹೀಗಾಗಿ ಒಂದಿಷ್ಟು ಜನ, ಒಂದಿಷ್ಟು ದಿನ ಒಟ್ಟಾಗಿ ಇರಬೇಕಾದ ಅವಕಾಶ ಬಂದಾಗ ಸಹಜವಾಗಿಯೇ ನಾನಾರೀತಿಯ ಗುಂಪುಗಳು, ಒಳಗುಂಪುಗಳು ನಿರ್ಮಾಣವಾಗುತ್ತವೆ. ಭಾಷೆ, ಜಾತಿ, ಶ್ರೀಮಂತಿಕೆಯ ಹಿನ್ನೆಲೆ ಈ ಎಲ್ಲಾ ಅಂಶಗಳೂ ಸೇರಿಕೊಂಡು ಗುಂಪುಗಳ ಸದಸ್ಯತ್ವ ನಿರ್ಧಾರವಾಗುತ್ತದೆ. ತಮಾಷೆಯೆಂದರೆ ಒಬ್ಬ ವ್ಯಕ್ತಿ ಒಂದೇ ಸಮಯದಲ್ಲಿ ಎರಡು ಮೂರು ಗುಂಪು, ಒಳಗುಂಪುಗಳಲ್ಲಿ ಸಕ್ರೀಯವಾಗಿರಬಲ್ಲ ಎಂಬುದು ಶ್ರೀಮಂತಿಕೆಯ ಕಾರಣಕ್ಕಾಗಿ ತನ್ನ ಜಾತಿಯ ಗುಂಪಿನೊಳಗೂ ಸಹಜವಾಗಿ ಬೆರೆಯುತ್ತಾನೆ. ಇವೆರಡರಲ್ಲೂ ಯಾವುದೇ ವಿರೋಧಾಭ್ಯಾಸ ಅವನಿಗೆ ಕಾಣುವುದಿಲ್ಲ, ಲೇಖಕರ ತಂಡದಲ್ಲೂ ಹೀಗೆ ಆಗಿತ್ತು.

ಆರ್.ಎಸ್.ಎಸ್ ನವರ ಹೈಟೆಕ್ ಸ್ವಾಗತ ಎಂಬ ಪ್ರಸಂಗದಲ್ಲಿ ಈ ಯಾತ್ರೆಯಲ್ಲಿ ಪಾಲ್ಗೊಂಡಿದ್ದ ನಮ್ಮ ಆಧುನಿಕ ವಿದ್ಯಾವಂತ ವರ್ಗದ ಪ್ರತಿನಿಧಿಗಳೆನ್ನಬಹುದಾದ ವ್ಯಕ್ತಿಗಳು, ದೇವರು ಮತ್ತು ಧರ್ಮದ ಬಗ್ಗೆ ಹೊಂದಿರುವ ದೃಷ್ಟಿ ಮತ್ತು ಧೋರಣೆಗಳನ್ನು ಅವರ ನಡುವಳಿಕೆ ಮತ್ತು ಅವರ ವೈಚಾರಿಕ ನಿಲುವುಗಳ ದಾಖಲೀಕರಣವಾಗಿದೆ.

ಈ ಪ್ರಸಂಗದ ಪೂರ್ವಾರ್ಧದಲ್ಲಿ ಲೇಖಕರು ಮತ್ತು ಅವರ ಸಹಯಾತ್ರಿಗಳು ನವದೆಹಲಿಯಲ್ಲಿ ಸರ್ಕಾರಿ ಅಧಿಕಾರಿಗಳಿಂದ ಮಾಹಿತಿ ಪಡೆಯುವ ಸಮಯದಲ್ಲಿ ಅವರನ್ನು ಆರ್.ಎಸ್.ಎಸ್. ಕಾರ್ಯಾಲಯಕ್ಕೆ ಕರೆದುಕೊಂಡು ಹೋದ ಸನ್ಮಾನಿಸಿದ ವಿವರಗಳಿವೆ.

ಜೈದಿಯೆಂಬ ಕ್ಯಾಂಪಿನಲ್ಲಿ ಮಾನಸ ಸರೋವರಕ್ಕೆ ಪೂಜೆ–ಆರತಿ ಮಾಡಲು ವ್ಯವಸ್ಥೆಯಿದೆ. ಮೇಲೆ ತಿಳಿಯಾದ ನೀಲಿ ಆಗಸ, ದೂರದಲ್ಲಿ ಎದುರಿಗೆ ಕೈಲಾಸ ಪರ್ವತ, ಹಿಂದುಗಡೆ ವಿಶಾಲವಾದ ಪ್ರಸ್ಥಭೂಮಿ, ನಮ್ಮೆದುರಿಗೆ ಕಣ್ಣಿಗೆ ಕಾಣುವಷ್ಟು ದೂರವೂ ಹರಡಿಕೊಂಡಿರುವ ಮಾನಸ ಸರೋವರ ಎಂತಹ ಚಪಲಚಿತ್ತರೂ, ಚಂಚಲ ಪ್ರವೃತ್ತಿಯವರೂ ಕೂಡಾ ತುಂಬಿಕೊಂಡಿರುತ್ತಾರೆ, ಮೂಕವಾಗಿರುತ್ತಾರೆ. ನಮ್ಮೆದುರಿಗಿರುವ ಅದೊಂದು ಕ್ಷಣ, ಅದೊಂದೆ ಕ್ಷಣದ, ಅದೊಂದೆ ಬಿಂದು ಮಾತ್ರ ನಿಜ ಎಂಬ ಭಾವನೆ. ಅದು ಅಪ್ರಜ್ಞಾಪೂರ್ವಕವಾಗಿ ಹೊಳೆಯುತ್ತಿರುತ್ತದೆ. ನಮ್ಮ ನಾಯಕಮಣಿಗೆ ಈ ಯಾವ ಗೊಂದಲಗಳೂ ಇರಲಿಲ್ಲ ಮಾನಸ ಸರೋವರ ಕಂಡ ತಕ್ಷಣ ಈಜುಕೊಳಕ್ಕೆ ನೆಗೆಯುವಂತೆ ನೆಗೆದು ಭಗವದ್ಧ್ವಜವನ್ನು ನೀರಿನಲ್ಲಿ ಅದ್ದಿ ಉದ್ವೇಗದಿಂದ ಉತ್ಕಂಠಿತನಾಗಿ 'ಬೋಲೋ ಭಾರತ್ ಮಾತಾಕಿ ಜೈ' ಎಂದು ಕಣ್ಣೀರು ಸುರಿಸಿದರು ಎಂದು ಹೇಳುತ್ತಾರೆ. ಇದೇ ತಂಡದಲ್ಲಿದ್ದ ಇನ್ನೊಬ್ಬ ಸಂಘಪರಿವಾರದವನು ಈತನಿಗಿಂತ ಭಿನ್ನವಾಗಿ 'ತುಂಬಾ ಘನತೆ–ಗಾಂಭೀರ್ಯದಿಂದ ವರ್ತಿಸಿದರು' ಎಂದು ಲೇಖಕರು ಹೇಳಿದ್ದಾರೆ.

ಲೇಖಕರು ಈ ಕಾಲದ ಸೈನಿಕರ ಜೀವನದ ಬಗ್ಗೆ ಹೊಂದಿದ ಕಲ್ಪನೆಗಳಾದರೂ ಎಂತಹವು ಎಂದರೆ ಹಸಿಹಸಿಯಾದವು, ರೋಮ್ಯಾಂಟಿಕ್ ಆದವು ಅನಿಸುತ್ತದೆ. ಎಲ್ಲ ತ್ಯಾಗಗಳಿಗಿಂತ ಶ್ರೇಷ್ಠವಾದದ್ದು ಪ್ರಾಣತ್ಯಾಗ ಅನ್ನುತ್ತಾರೆ. ಸಿನಿಮಾಗಳಲ್ಲಿ ಕಥೆ, ಕಾದಂಬರಿಗಳಲ್ಲಿ 'ಬೋಲೋ ಭಾರತ್ ಮಾತಾಕಿ ಜೈ' ಎಂದು ಕೂಗುತ್ತಾ ಮಣ್ಣನ್ನು ಹಣೆಗೆ ಪೂಸಿಕೊಳ್ಳುತ್ತಾ ಸೈನಿಕರು ಪ್ರಾಣತ್ಯಾಗ ಮಾಡುವಾಗ ಮೆಚ್ಚುವುದು, ಪುಳಕಗೊಳ್ಳುವುದು ಸುಲಭ. ನಮಗೆಲ್ಲ ಆಗುತ್ತಿದ್ದ ಪುಳಕ, ಸಂತಸ ಈ ರೀತಿ ಯಾವುದೇ ನಮ್ಮ ಅಣ್ಣ–ತಮ್ಮಂದಿರಲ್ಲಿ, ಭಾವ–ಭಾವಮೈದುನರಲ್ಲಿ ಯಾರಾದರೂ ಈ ರೀತಿಯ ಪ್ರಾಣತ್ಯಾಗ ಮಾಡಬೇಕಾದ ಸಂದರ್ಭ ಬಂದಾಗ ನಮಗೆನನ್ನಿಸುತ್ತದೆ ಅನ್ನುವುದೇ ಮುಖ್ಯ, ಅಂದರೆ ಸೇನೆಯ ಜೀವನ ನಮ್ಮ ಬದುಕಿನ ಒಂದು ಅಂತರ್ಗತ ಭಾಗವಾಗುತ್ತದೆ.

ಈ ಪ್ರವಾಸದ ಸಂದರ್ಭದಲ್ಲಿ ಆ ವರ್ಗದ ಜನಜೀವನವನ್ನು ಹತ್ತಿರದಿಂದ ಲೇಖಕರು ನೋಡಿರುವರು. ಸೈನಿಕರು ಎಂದರೆ ಇಂಡೋಟಿಬೇಟಿಯನ್ ಪೋಲಿಸ್‌ಗೆ ಸೇರಿದವರು. ಅವರು ಆಗಾಗ ರಜಾ ತೆಗೆದುಕೊಂಡು ಮನೆಗಳಿಗೆ ಹೋಗಿ ಬರುತ್ತಿದ್ದರು.

ಅವರನ್ನು ಲೇಖಕರು ವಿಚಾರಿಸುತ್ತಾ ಇದ್ದರು, ಅಂದರೆ ಕುಟುಂಬ, ಮಕ್ಕಳ ಶಿಕ್ಷಣ ಮತ್ತು ಸೈನ್ಯದಲ್ಲಿ ಉಪಯೋಗಿಸುವ ವಸ್ತುಗಳ ಬಗ್ಗೆ.

ಸೈನಿಕರ ಜೀವನ ಹೇಳಿಕೊಳ್ಳಲು ತುಂಬಾ ಕಷ್ಟವಾಗುತ್ತದೆ, ಏಕೆಂದರೆ ಅವರು ಇರುವ ಸ್ಥಳಕ್ಕೆ ಜನ ಸಂಪರ್ಕವಿಲ್ಲ. ಚಳಿ, ಗಾಳಿ, ಬಿಸಿಲು ಇವುಗಳನ್ನೆಲ್ಲ ಎದುರಿಸಿ ಸೇವೆ ಸಲ್ಲಿಸಬೇಕಾಗಿದೆ.

ಲೇಖಕರು ಪರಿಚಯಮಾಡಿಕೊಂಡಿದ್ದ ಸೈನಿಕರ ಮಾಹಿತಿ ಹೇಳುವರು. ಅವರಿಗೆ ಇದ್ದ ಎಲ್ಲಾ ಸೌಲತ್ತುಗಳ ಬಗ್ಗೆಯೂ ವಿವರಿಸಿರುವರು. ಅವರ ಗುಂಪಿನಲ್ಲೊಬ್ಬನಿಗೆ ಇಕ್ಕಟ್ಟಿನ ಸ್ಥಿತಿ ಬಂದು ಅವನಿಗೆ ಹೃದಯ ಮತ್ತು ರಕ್ತದ ಒತ್ತಡದ ತೊಂದರೆಯಿದೆಯೆಂದು ಹೇಳಿ ಪ್ರವಾಸದ ಮುಂದಿನ ಭಾಗಕ್ಕೆ ಹೋಗಲು ನಿರಾಕರಿಸಿದರು.

ಪ್ರವಾಸಕ್ಕೆ ಹೋಗಿದ್ದ ಲೇಖಕರು ಪ್ರತಿದಿನ ಆಗುವ ಚಟುವಟಿಕೆ ಅಲ್ಲಿರುವ ಗಿಡ, ಮರ, ಪರಿಸರದಲ್ಲಿರುವ ಸೌಂದರ್ಯವನ್ನು ಸವಿದ ವಿಚಾರಗಳನ್ನು ತಮ್ಮ ದಿನಚರಿಯಲ್ಲಿ ಬರೆಯುತ್ತಿದರು.

'ನನ್ನ ಕಣ್ಣುಗಳು ಇಂದು ಸಫಲವಾಯಿತು, ಕಾಣಬೇಕಾದುದನ್ನು ಕಂಡಂತಾಯಿತು' ಎಂದು ಲೇಖಕರು ಹೇಳುತ್ತಾರೆ. ನೋಡಬೇಕಾದ ರಮಣೀಯವಾದ ವಸ್ತುಗಳನ್ನೆಲ್ಲ ಸರ್ವೋತ್ಕೃಷ್ಟವಾದ ವಸ್ತುವನ್ನೆ ಕಂಡಂತಾಯಿತು. ಇದಕ್ಕಿಂತ ಹೆಚ್ಚು ಆಹ್ಲಾದಕರವಾದ, ಪ್ರೀಯವಾದ ನೋಟ ಇನ್ನೊಂದು ಇರಲಾರದೆಂಬುದು ಲೇಖಕರ ಅಭಿಮತ. ಬಾಣಭಟ್ಟನ ಚಂದ್ರಾಪೀಡ, ಬನ್ನಂಜೆ ಗೋವಿಂದಾಚಾರ್ಯರ ಅನುವಾದದಲ್ಲಿ ಮಾನಸ ಸರೋವರ ನೋಡಿದಾಗ ಅದನ್ನು ಕುರಿತು ಈಗ ಬರೆಯುತ್ತಿರುವಾಗ, ಬಾಣಭಟ್ಟ ಬರೆದದ್ದು ಕೂಡ ಸಾಲದೆನಿಸುತ್ತದೆ. ಅಂತದ್ದರಲ್ಲಿ ನಾನು ಅದ್ಯಾವ ಧೈರ್ಯದಿಂದ ಬರೆಯಲಿ' ಎಂದು ಲೇಖಕರು ಹೇಳುತ್ತಾರೆ.

ಮಾನಸ ಪ್ರದಕ್ಷಿಣೆ ಮಾಡುವಾಗ ಸದ್ದುಗದ್ದಲ ಮಾಡಬಾರದೆಂದು ಪ್ರತೀತಿಯಿದೆ. ಏಕೆಂದರೆ 'ದೇವರು ಆಗಾಗ ಬಂದು ಸ್ನಾನ ಮಾಡುವ ಸರೋವರ ಇದು' ಎಂದು ಮಾನಸ ಸರೋವರದ ಬಗ್ಗೆ ಲೇಖಕರು ಹೇಳುತ್ತಾರೆ. ಅದನ್ನು ನೋಡಿದ ಮೇಲೆ ಲೇಖಕರಿಗೆ ಬೇಂದ್ರೆಯವರ 'ಗಂಗಾವತರಣ'ದ ನೆನಪು ಬಂತು. ಬೇಂದ್ರೆಯವರ ಸಾಧನಕೇರಿಯ ಮನೆ, ಮನೆಯ ಗ್ರಂಥಾಲಯ, ಸಾಧನ ಕೇರಿಯ ಕೆರೆ, ಬಯಲು ಇವುಗಳ ಹತ್ತಿರ ಓಡಾಡಿದಾಗ, ಬೇಂದ್ರೆ ಬಿಟ್ಟು ಹೋದ ಕಂಪನಗಳು ಎಲ್ಲವೂ ಅನುಭವಕ್ಕೆ ಬರುತ್ತವೆ.

'ಸದ್ದು! ದೇವರು ಸ್ನಾನ ಮಾಡುತ್ತಿದ್ದಾರೆ' ಎಂಬ ಈ ಪ್ರವಾಸ ಕಥನವೂ ಭಿನ್ನ ಸ್ವರೂಪದ್ದಾಗಿದೆ. ಪ್ರವಾಸ ಕೈಗೊಳ್ಳುವ ನಿರ್ಧಾರಕ್ಕೆ ಕಾರಣವಾದ ಸಂಗತಿಗಳು, ಪ್ರವಾಸದ

ಸಿದ್ಧತೆ, ಪ್ರವಾಸಕಾಲದಲ್ಲಿ ಎದುರಾದ ಸಮಸ್ಯೆಗಳು, ಭೇಟಿಯಾದ ವ್ಯಕ್ತಿಗಳು, ನೋಡಿದ ಮೋಡಗಳು, ಮುಂತಾದವುಗಳ ಬಗ್ಗೆ ಇಲ್ಲಿ ವಿವರಗಳಿವೆ.

'ದೇವರ ಸಿಂಹಾಸನವೆಂದು ಕರೆಯಲ್ಪಡುವ ಕೈಲಾಸದ ಬಗ್ಗೆ ಎಲ್ಲರ ಎದೆಯಲ್ಲಿರುವ ಮಾನಸ ಸರೋವರದ ಬಗ್ಗೆ ಈ ಪ್ರಸಂಗದಲ್ಲಿ ನಾನು ಬರೆದಿರುವ ಮಾಹಿತಿಗಳೆಲ್ಲ ಬಹುತೇಕ ಪ್ರಣವಾನಂದರ ಪುಸ್ತಕದಿಂದ ಸಂಗ್ರಹಿಸಿರುವುದು. ಅವರು ಅಲ್ಲಿ ಹತ್ತಾರು ವರ್ಷ ಇದ್ದುಕೊಂಡು ಸಾಹಸಮಯವಾದ ಆಧ್ಯಾತ್ಮಿಕ ಜೀವನ ನಡೆಸಿದವರು. ಆಧ್ಯಾತ್ಮಿಕ ಸ್ವಭಾವದ ಜೊತೆಗೆ ಅವರಲ್ಲಿ ವೈಜ್ಞಾನಿಕ ಮನೋಧರ್ಮ ಕೂಡಾ ಇತ್ತು, ಹೀಗಾಗಿ ಅವರು ಪ್ರತ್ಯಕ್ಷವಾಗಿ ಕಂಡ ಅನುಭವದಲ್ಲಿ ಕೈಲಾಸ–ಮಾನಸ ಸರೋವರ, ರಾಕ್ಷಸ ಸರೋವರ ಎಲ್ಲವೂ ಅವಿಭಾಜ್ಯವಾದದ್ದು' ಎಂದಿರುವರು.

ಕೈಲಾಸದ ಪ್ರವಾಸ ರುದ್ರ ಸೌಂದರ್ಯದಂತೆಯೇ ಬಹು ಕಷ್ಟಕರವಾದದ್ದು. ಕಡಿದಾದ ದಾರಿಯಲ್ಲಿ ನಡೆಯುವುದು ಪ್ರಯಾಸಕರ ಎಂದು ಲೇಖಕರು ಹೇಳುತ್ತಾರೆ. ಅಂದರೆ ಪ್ರವಾಸದುದ್ದಕ್ಕೂ ಆದ ಅಪಘಾತಗಳನ್ನು ವಿವರಿಸುತ್ತಾರೆ. ಪ್ರವಾಸ ಕಥನಗಳ ದೊಡ್ಡ ತೊಂದರೆಯೆಂದರೆ ಪ್ರವಾಸಿಗಳ ಕುತೂಹಲ, ಆಸಕ್ತಿಗಳಲ್ಲಿರುವಷ್ಟು ಪ್ರಾಮಾಣಿಕತೆ ಅವರ ಅನುಭವಗಳಲ್ಲಿರುವುದಿಲ್ಲ. ಓದುಗರಲ್ಲಿರುವ ಮಾಹಿತಿಯ ಹಸಿವನ್ನು ನೀಗಲೆಂದೇ ಈವತ್ತಿನ ಬಹುಪಾಲು ಪ್ರವಾಸ ಕಥನಗಳು ಹುಟ್ಟುತ್ತಿರುವುದು. ನಿರೂಪಣೆಗೆ ಪಳಗಿದ ಬರಹಗಾರರಾದರಂತೂ ಒಂದು ಸಾಧಾರಣ ಸಂಗತಿ ಅಥವಾ ಅನುಭವವನ್ನು ಬಹು ರಸವತ್ತಾಗಿ, ಸಾಂಕೇತಿಕವಾಗಿ ಬರೆದು ಬಿಡುತ್ತಾರೆ. ಇದು ತಪ್ಪಲ್ಲ, ಆದರೆ ಆ ಬರವಣಿಗೆಗೆ ಅನುಭವವೇ ಅಂತಿಮ ಸತ್ಯವೆಂಬ ಅಹಂಕಾರವಿರಬಾರದು. ನಗರಗಳಿಗಾಗಲಿ, ಗಿರಿಧಾಮಗಳಿಗಾಗಲಿ ದಿನನಿತ್ಯದ ಬದುಕಿನ ಒಂದು ಲಯವಿದ್ದೆ ಇರುತ್ತದೆ, ಎನ್ನುವುದನ್ನು ನಾವು ಮರೆಯಬಾರದು.

ಕೆ. ಸತ್ಯನಾರಾಯಣ ಅವರು ಹಿಂದೂತ್ವದ ಮೂಲದಿಂದ ಅನುಭವಿಸಿದ ಕೈಲಾಸ ಯಾತ್ರೆಯ ಕಥನವಿದು. ಹೀಗಾಗಿ ಇಲ್ಲಿ ಭಾರತ ಚೀನಾ ನಡುವಿನ ಹೋಲಿಕೆಗಳು ಪ್ರಧಾನ ನೆಲೆಗೆ ಸೇರುತ್ತವೆ.

## ೨.೪ ಹಿಮಾಲಯ ಯಾತ್ರೆ

ಸ್ವಾಮಿ ಸೋಮನಾಥಾನಂದರ ತೀರ್ಥಯಾತ್ರೆಯ ಅನುಭವಗಳ ಸಂಗ್ರಹವೇ ಈ 'ಹಿಮಾಲಯ ಯಾತ್ರೆ'. ಹಿಮಾಲಯದ ಸೌಂದರ್ಯ, ಪಾವಿತ್ರ್ಯತೆ ಮತ್ತು ನೀರವಶಾಂತಿಯನ್ನು ಸವಿಸ್ತಾರವಾಗಿ ತಿಳಿಯಪಡಿಸಿದ್ದಾರೆ. ಪ್ರತಿಯೊಬ್ಬರ ಜೀವನದಲ್ಲಿ

ಯಾತ್ರೆ ಎಂಬುದು ಬಹುಮುಖ್ಯವಾದದ್ದು. ಹಲವರು ಹಲವು ಉದ್ದೇಶಗಳನ್ನಿಟ್ಟುಕೊಂಡು ಯಾತ್ರೆಯನ್ನು ಮಾಡುತ್ತಾರೆ. 'ಹಿಮಾಲಯ ಯಾತ್ರೆ' ಈ ಪುಸ್ತಕದುದ್ದಕ್ಕೂ ಅಲ್ಲಿನ ಪರಮಪವಿತ್ರ ಸ್ಥಳಗಳ ಕುರಿತು ಮನೋಜ್ಞ ನಿರೂಪಣೆ.

ಭಾರತೀಯರಿಗೆ ಹಿಮಾಲಯದ ಯಾತ್ರೆ ಎಂದರೆ ಅದೊಂದು ರೋಮಾಂಚನಕಾರಿ ಅನುಭವವೂ ಹೌದು. ಗತಕಾಲದಿಂದಲೂ ಆ ಸ್ಥಳಕ್ಕೆ ತನ್ನದೇ ಆದ ಪಾವಿತ್ರ್ಯತೆ ಉಂಟು. ಹಿಮಾಲಯವು ಹಲವು ನದಿಗಳ ಜನ್ಮಸ್ಥಳವಿದು. ಎಷ್ಟೋ ಜನ ಋಷಿಮುನಿಗಳು ತಪಸ್ಸು ಗೈದ ಸ್ಥಳ. ಪಾರ್ವತಿಗೆ ಶಿವನು ಒಲಿದಿದ್ದು ಇದೇ ಹಿಮಾಲಯದಲ್ಲಿ, ಈ ಎಲ್ಲ ಕಾರಣಗಳಿಂದ ಲೇಖಕರು ಹಿಮಾಲಯದ ಪ್ರದೇಶಗಳನ್ನು ನೋಡಲು ತೀರ್ಮಾನಿಸಿದ್ದು. ನಂತರ ಅವರು ಮೈಸೂರನ್ನು ೧೯೫೦ ಜುಲೈ ೫ ನೇ ದಿನಾಂಕದಂದು ಪ್ರಯಾಣ ಬೆಳೆಸಿ, ದೆಹಲಿಗೆ ತೆರಳಿದರು, ಅಲ್ಲಿಯ ಹಲವಾರು ಕ್ಷೇತ್ರಗಳನ್ನು ಸಂದರ್ಶಿಸಿದರು. ದೆಹಲಿಯ ಅರಸರು ಕಟ್ಟಿಸಿದ ಸಮಾಧಿ ಅದರಲ್ಲೂ ಔರಂಗಜೇಬನು ಅವನ ಪ್ರೀತಿಯ ಮಗಳಿಗಾಗಿ ಕಟ್ಟಿಸಿದ ಸಮಾಧಿ ಮನಸ್ಸನ್ನು ಆಕರ್ಷಿಸಿತು.

ಮುಂದೆ ದೆಹಲಿಯಿಂದ ಪಠಾನ್ ಕೋಟ್ ಅಮೃತಸರ ಸಂದರ್ಶಿಸಿ, ಕಾಶ್ಮೀರಕ್ಕೆ ಹೋದರು. ಭರತ ಖಂಡದ ದೇಶಿಯ ಸಂಸ್ಥಾನಗಳಲ್ಲೆಲ್ಲಾ ಕಾಶ್ಮೀರ ಅತಿದೊಡ್ಡದು. ಸುಮಾರು ೮೫,೦೦೦ ಚದರ ಮೈಲಿ ವಿಸ್ತೀರ್ಣವಿದೆ. ಅಂದರೆ ಹಳೆಮೈಸೂರಿನ ಮೂರರಷ್ಟಿದೆ. 'ರಾಜತರಂಗಿಣಿ' ಎಂಬ ಕೃತಿಯನ್ನು ಬರೆದ 'ಕಲ್ಹಣ'ನನು ಕಾಶ್ಮೀರದಿಂದ ಬಂದವನೆನ್ನಲಾಗಿದೆ. ೧೨ನೇ ಶತಮಾನದಲ್ಲಿ ಕಾಶ್ಮೀರದ ಮೊದಲ ಚರಿತ್ರೆ ಇದಾಗಿದೆ. ತದನಂತರ ಲೇಖಕರು ಜಮ್ಮು ಕಾಶ್ಮೀರದಲ್ಲಿರುವ ಎರಡನೇ ಪಟ್ಟಣ ಇದನ್ನು ರಾಮಾಯಣದಲ್ಲಿ ಬರುವ 'ಕಪಿಸೇನಾ ಜಾಂಬವಂತ' ಕಟ್ಟಿದನೆಂದು ಹೇಳುತ್ತಾರೆ. ಅಂತಹ ಜಮ್ಮು-ಕಾಶ್ಮೀರದ ತುಂಬಾ ರಾಮಾಯಣ-ಮಹಾಭಾರತದ ಕಥೆಗಳು ರಾರಾಜಿಸುತ್ತವೆ. ನಂತರ ಜಮ್ಮುವಿನಿಂದ ಶ್ರೀನಗರಕ್ಕೆ ಪ್ರಯಾಣ ಬೆಳೆಸಿದರು, ಈ ಸಂದರ್ಭದಲ್ಲಿ ಲೇಖಕರು ಸಿಖ್‌ರೊಡನೆ ಒಳ್ಳೆಯ ಸ್ನೇಹವನ್ನು ಸಂಪಾದಿಸಿದರು.

ಕಾಶ್ಮೀರಕಣಿವೆ ಬನಿಹಾಲ್‌ನಿಂದ ಪೀರ್ ಗುಹೆಗೆ ಸುಮಾರು ೨೦ ಮೈಲಿಗಳು. ೨೪ನೇ ಜುಲೈ ಶ್ರೀನಗರದಿಂದ ಪಹಿಲ್‌ಗಾಮಿಗೆ ಬಸ್ಸಿನಲ್ಲಿ ಹೊರಟ ಇವರು ಸುಮಾರು ೩೦ ಮೈಲಿ ಬಸ್ಸಿನಲ್ಲಿ ಬಂದ ನಂತರ 'ಅನಂತನಾಗ' ಎಂಬ ಚಿಲುಮೆ ಸಿಗುವುದು. ಚಂದನವಾಡಿ, ಶೇಷನಾಗ, ಪಂಚತರಣಿ, ಅಮರನಾಥ ಹೀಗೆ ದಾರಿಯುದ್ದಕ್ಕೂ ಹಲವಾರು ಕ್ಷೇತ್ರಗಳನ್ನು ಸಂದರ್ಶಿಸಿ ಅನುಭವ ಪಡೆದರು.

'ಹರಿದ್ವಾರ - ಹಿಮಾಲಯ' ಪರ್ವತಸ್ತೋಮದಲ್ಲಿ ಒಂದು ಆಕರ್ಷಕ ಶಕ್ತಿ. 'ಹೃಷಿಕೇಶ' ಕೂಡಾ ಹಿಮಾಲಯದ ಅತ್ಯಂತ ಪ್ರಸಿದ್ಧ ಸ್ಥಳ. ಇಲ್ಲಿ ಪರಮಪವಿತ್ರವಾದ ಸ್ಥಳಗಳುಂಟು. ಆಶ್ರಮಗಳು, ಬಗೆ-ಬಗೆಯ ಸನ್ಯಾಸಿಗಳು ಆ ತಾಣ ವಿಶ್ರಾಂತವಾಗಿ ನಿಶಬ್ದತೆಯ ತವರೂರು ಎನಿಸಿತು. ಇಲ್ಲಿ ಹಲವಾರು ನಮೂನೆಯ ಮಠಮಂದಿರಗಳಿರುವದು ವಿಶೇಷ. ರಾಮ-ಭರತರ ಅನನ್ಯ ಪ್ರೀತಿಯ ಪ್ರತೀಕ ಎಂಬಂತೆ ಹಲವು ಕಟ್ಟಡಗಳು ಅವರ ಪ್ರೀತಿಯ ಕುರುಹುಗಳೆಂಬಂತೆ ಇಲ್ಲಿ ರಾರಾಜಿಸುತ್ತಿವೆ. ಭ್ರಾತೃಪ್ರೇಮದ ಸ್ಮಾರಕಗಳೂ ಇವೆ. ಹಾಗೆಯೇ ಮುಂದುವರೆಯುತ್ತಾ ಲೇಖಕರು ದೇವಪ್ರಯಾಗದಲ್ಲಿ ತಮ್ಮ ಮುಂದಿನ ಪ್ರಯಾಣಕ್ಕೆ ಹಲವು ಸಾಧನ ಸಲಕರಣೆಗಳನ್ನು ಪಡೆದುಕೊಂಡು ಮುಂದೆ ರುದ್ರ ಪ್ರಯಾಗ ಅಲ್ಲಿ ಭಾಗೀರಥಿ ಮತ್ತು ಅಲಕನಂದಾ ಎಂಬೆರಡು ನದಿಗಳ ಸಂಗಮ ಅಂತಹ ಪುಣ್ಯ ಸ್ಥಳದಲ್ಲಿ ಶ್ರೀರಾಮನು ತಪಸ್ಸು ಮಾಡಿದ್ದನೆಂದು ಪ್ರತೀತಿ.

ಜುಲೈ ತಿಂಗಳಲ್ಲಿ ಲೇಖಕರು ಚಂದ್ರಪ್ರಯಾಗಕ್ಕೆ ಹೊರಟಾಗ ಎದುರಿಗೆ ಕೇದಾರನಾಥ ಪರ್ವತಸ್ತೋಮ ಕಾಣುತ್ತಿತ್ತು, ದಾರಿಯುದ್ದಕ್ಕೂ ನಡೆದು ಹೋಗುವಾಗ ಲೇಖಕರಿಗೆ ಬಹಳಷ್ಟು ರೋಮಾಂಚನಕಾರಿ ಅನುಭವಗಳಾಗಿದ್ದವು.

ಕೇದಾರನಾಥ ದರ್ಶನವಂತೂ ಲೇಖಕರಿಗೆ ತುಂಬಾ ಖುಷಿ ಕೊಟ್ಟಿತು. ಅಲ್ಲಿಯ ಭಕ್ತಿ ಪರಾಕಾಷ್ಠೆಯ, ಜೈಕಾರ ಮುಗಿಲು ಮುಟ್ಟಿತು. ರಮ್ಯ ಮನಮೋಹಕ ದೃಶ್ಯಗಳು ಲೇಖಕರ ಮನಸೂರೆಗೊಂಡವು ಅಂತೂ ಸಿಹಿ ಅನುಭವಗಳ ಮಧ್ಯ ಕೇದಾರನಾಥನ ದರ್ಶನದಿಂದ ಲೇಖಕರ ಮನಸ್ಸು ತೃಪ್ತಿಯಾಯಿತು.

ಕೇದಾರನಾಥ ದರ್ಶನ ಮುಗಿದ ಕೂಡಲೆ ಲೇಖಕರು ಮುಂದೆ ಹೊರಡಲು ಅಣಿಯಾದರು. ಅಲ್ಲಿಯ ಚಳಿಗೆ ಲೇಖಕರು ಕರಗಿದರು, ಮುಂದೆ ಊಖೀಮಠ, ತುಂಗನಾಥ, ಗೋಪೇಶ್ವರ, ಜೋಶಿಮಠ, ದೇವದೇಖನಿ ಮೂಲಕ ಹಾಯ್ದು ಬದರಿನಾಥಕ್ಕೆ ಬಂದರು. ಸ್ವಾಮಿ ಸೋಮನಾಥರವರ ಬರವಣಿಗೆಯಲ್ಲಿ ಹಿಮಾಲಯದ ಪ್ರಕೃತಿ, ವರ್ಣನೆ ಸುಂದರವಾಗಿ ಮೂಡಿ ಬಂದಿದೆ. ನದಿ, ಪರ್ವತ, ಶಿಖರ, ಕಾನನ, ಮೇಘಮಾಲೆ, ವಿಶಾಲ ಗಗನ ಮುಂತಾದವುಗಳ ರಮ್ಯ ವರ್ಣನೆ ಇಲ್ಲಿದೆ.

## ೨.೫ ಹಿಮಾಲಯದ ಮಡಿಲಲ್ಲಿ

ಸ್ವಾಮಿ ಅಖಂಡಾನಂದರು ಕೈಗೊಂಡ ಪ್ರವಾಸದ ಅನುಭವಗಳನ್ನು ತಮ್ಮದೆಯಾದ ಶೈಲಿಯಲ್ಲಿ ಬರೆದಿರುವರು. ತಮ್ಮ ಜೀವನದಲ್ಲಿ ಆದ ಅನುಭವಗಳನ್ನು ಸುಸಂಬದ್ಧ

ರೀತಿಯಲ್ಲಿ ಬರೆಯಬೇಕು ಎಂಬುದು ಅವರ ಆಸೆ. ಆ ಕಾರಣಕ್ಕಾಗಿ ಹಿಮಾಲಯದ ಮಡಿಲಲ್ಲಿ ಪ್ರವಾಸವನ್ನು ಕೈಗೊಂಡು ಒಂದು ಪುಸ್ತಕವನ್ನು ಬರೆಯಬೇಕು ಎಂಬ ಕಲ್ಪನೆಯು ಅವರದ್ದಾಗಿತ್ತು.

ಸ್ವಾಮಿ ಅಖಂಡಾನಂದರು ಯಾವುದೇ ರೀತಿಯ ಟಿಪ್ಪಣಿಯನ್ನು ಅಥವಾ ವಿಷಯವನ್ನು ಸಹ ಅವರು ಹೊಂದಿರಲಿಲ್ಲ. ಯಾವುದೇ ರೀತಿಯ ವಿಷಯದ ಸಹಾಯವಿಲ್ಲದೆ, ಸ್ನೇಹಿತರ ಒತ್ತಾಯದ ಮೇರೆಗೆ ಅವರು ಪ್ರವಾಸವನ್ನು ಕೈಗೊಂಡಿದ್ದರು.

ಸ್ವಾಮಿ ಅಖಂಡಾನಂದರು ಹರಿದ್ವಾರಕ್ಕೆ ತಲುಪಿದ ಪರಿಯನ್ನು ವಿವರಿಸುವರು. ವೈಶಾಖದ ಕೊನೆಯ ದಿನವಾದ ಸಂಕ್ರಾಂತಿಗೆ ಮೊದಲೇ ಹರಿದ್ವಾರವನ್ನು ತಲುಪಿದರು. ಅಲ್ಲಿಯ ಅನುಭವಗಳನ್ನು ವಿವರಿಸುತ್ತಾ ಹೋಗುವರು. ಅವರು ಹರಿದ್ವಾರದಲ್ಲಿನ ಮಳೆ, ಚಳಿ, ಅಲ್ಲಿಯ ಜನಜೀವನ ಕುರಿತು ವಿಶ್ಲೇಷಿಸುವರು.

ಹಣವನ್ನು ಧಾರಾಳವಾಗಿ ತಂದಿದ್ದ ಪಂಜಾಬಿನ ಸನ್ಯಾಸಿಗಳ ಜೊತೆಗೆ ಲೇಖಕರು ಬದರಿ ಕೇದಾರಗಳ ಕಡೆಗೆ ಪಯಣವನ್ನು ಕೈಗೊಂಡರು. ಶ್ರೀಮಂತ ಜನರು ಪ್ರತಿವರ್ಷವು ಹಿಮಾಲಯದಲ್ಲಿದ್ದ ಬದರಿನಾಥ ದೇವಾಲಯದಲ್ಲಿರುವ ಸನ್ಯಾಸಿ ಬಳಗದವರಿಗೆ ದಾನದ ರೂಪದಲ್ಲಿ ಅವರ ಸೇವೆಯನ್ನು ಮಾಡುವರು.

ಸ್ವಾಮಿ ಅಖಂಡಾನಂದರು ಲಿಂಗಾಯತ ಜಂಗಮರು, ಅವರು ಹಿಮಾಲಯಕ್ಕೆ ಹೋಗಿರುವಾಗ ಅವರಿಗೆ ಕರ್ನಾಟಕದವರು ಕಂಡಿರುವ ಪರಿಯನ್ನು ವಿವರಿಸಿರುವರು. ಹಿಮಾಲಯದ ಮುಸ್ಸೂರಿ ಎಂಬ ಪ್ರದೇಶದಲ್ಲಿ ಅವರು ಹಸಿವಿನಿಂದ ಬಳಲುವ ಸಮಯದಲ್ಲಿ ಒಂದು ಮುದುಕಿಯು ತಿನ್ನಲು ರೊಟ್ಟಿ ಚಟ್ನಿಯನ್ನು ಕೊಟ್ಟು, ಹಸಿವನ್ನು ಹಿಂಗಿಸಿದನ್ನು ವಿವರಿಸುವರು. ಅಲ್ಲಿಯ ಮುಗ್ಧ ಜನರು ಯಾವ ರೀತಿಯಿಂದ ಬೇರೆಯವರಿಗೆ ಸಹಕರಿಸುವರು ಎಂಬುದನ್ನು ತಿಳಿಯಪಡಿಸುವರು. ಹೃಷಿಕೇಶದಲ್ಲಿ ಗಂಗಾನದಿಯ ಹರಿಯುವ ಪರಿಯನ್ನು ವಿವರಿಸುವರು.

ಸ್ವಾಮಿ ಅಖಂಡಾನಂದರು ತೆಹರಿಯನ್ನು ಬಿಟ್ಟು ಗಂಗೋತ್ರಿಗೆ ಸಾಗುವ ಸಮಯದಲ್ಲಿ ಕಂಡುಂಡ ಅನುಭವಗಳನ್ನು ಒಂದೊಂದಾಗಿ ನೀಡಿದ್ದಾರೆ.

ಹೊಸ ಹೊಸ ಸಾಧುಗಳ ಪರಿಚಯವನ್ನು ಮಾಡಿಕೊಳ್ಳುತ್ತಾ ಸಾಗುವರು, ಕಾನ್‌ಫತೇ ಸಾಧುಗಳು ಎಂದರೆ–ಹರಿದ ಕಿವಿ ಅಲ್ಲಿಯ ಸಾಧುಗಳು ತಮ್ಮ ಕಿವಿಯನ್ನು ಹರಿದುಕೊಂಡಿರುವರು, ಕಾನ್‌ಫತೇ ಎಂಬ ಕಿವಿಯ ಹರಿದುಕೊಂಡಿರುವ ಜಂಗಮ ಸಾಧುಗಳನ್ನು ನೋಡಿ ಲೇಖಕರು ಅವರ ವಿವರಣೆಯನ್ನು ಮಾಡುವರು.

ಸ್ವಾಮಿ ಅಖಂಡಾನಂದರು ಯಮನೋತ್ರಿ ಪ್ರಸ್ಥಭೂಮಿಯಲ್ಲಿ ಜನರ ಉಡುಗೆ-ತೊಡುಗೆಗಳು ಹೇಗೆ ಇದ್ದವು ಎಂಬುದರ ಪರಿಯನ್ನು ಸಾರುವರು. ನಾರಿನಿಂದ ತಯಾರಿಸಿದ ಷೂಗಳು, ಗುಂಡನೆಯ ಟೋಪಿ, ಉದ್ದವಾದ ನಿಲುವಂಗಿಗಳು ಈ ರೀತಿ ಅವರು ಬಟ್ಟೆಯನ್ನು ಧರಿಸುವ ಪರಿಯನ್ನು ತಿಳಿಸುವರು.

ಲೇಖಕರು ವಿವಿಧ ರೀತಿಯ ವಿಷಪೂರಿತ ಕೀಟಗಳು ಮತ್ತು ನೊಣಗಳು, ನೀಲಿ ಬಣ್ಣದ ವಿಷಪೂರಿತ ಜಿರಲೆಗಳು ಕಂಡ ಪರಿಯನ್ನು ತಿಳಿಯ ಪಡಿಸುವರು. ಹಿಮಾಲಯದಲ್ಲಿ ಶಿವ-ಪಾರ್ವತಿಯರ ಮಿಲನವನ್ನು ಅವರು ಸಾರಿ ಹೇಳುವರು, ಮಂಜು ಮುಸುಕಿರುವ ಸಮಯದಲ್ಲಿ ವರ್ಣರಂಜಿತ ಕಾಮನಬಿಲ್ಲು ಹೊಳೆಯುವ ರೀತಿಯನ್ನು ಸುಂದರವಾಗಿ ವರ್ಣಿಸುವರು. ಶಿವ-ಪಾರ್ವತಿಯರ ಮಿಲನವನ್ನು ವಿವರಿಸುವರು. ಯಮುನೋತ್ರಿಯಲ್ಲಿ ದೊಡ್ಡದೊಂದು ದೇವಸ್ಥಾನ, ಅದು ಯಮುನಾ ಮಾತೆಯ ದೇವಸ್ಥಾನ. ಈ ದೇವಾಲಯದ ಇತಿಹಾಸವನ್ನು ವಿವರಿಸುವರು. ಯಮುನೆಯ ಎರಡು ರೀತಿಯ ಮೂರ್ತಿಗಳ ಕುರಿತು ತಿಳಿಸುವರು. ೧.ಬೆಳ್ಳಿಯ ವಿಗ್ರಹ, ೨.ಕಲ್ಲಿನ ವಿಗ್ರಹ. ಅದರ ಪಕ್ಕದಲ್ಲಿ ಕುಳಿತು ಬಿಸಿನೀರಿನಿಂದ ಕೂಡಿದ ಕೆರೆಯು ಯಮುನೆಯ ದೇವಸ್ಥಾನದ ಪಕ್ಕದಲ್ಲಿರುವುದು.

'ಯಾರು ಇನ್ನೂ ಹಿಮಾಲಯ ದರ್ಶನ ಮಾಡಿಲ್ಲವೂ ಅವರು ತಮ್ಮ ಜೀವಿತಾವಧಿಯಲ್ಲಿ ಒಮ್ಮೆಯಾದರೂ ಹಿಮಾಲಯದ ಕ್ಷೇತ್ರದರ್ಶನವನ್ನು ಮಾಡಲೇಬೇಕು' ಎಂದು ಜನರಿಗೆ ಸಾರಿ ಹೇಳುವರು. ಹಿಮಾಲಯ ಜನರ ಮನವು ಪರಿವರ್ತಿಸುವ ಸ್ಥಾನವೆಂದು ಕರೆಯುವರು.

ಇಲ್ಲಿ ವಿಶ್ಲೇಷಣೆಗೊಳಪಡಿಸಲಾದ ಐದು ಪ್ರವಾಸ ಕಥನಗಳು ವಿಭಿನ್ನ ವೃತ್ತಿ-ಪ್ರವೃತ್ತಿಗಳ ಐದು ಲೇಖಕರವು. ಸ್ವಾಮಿ ಅಖಂಡಾನಂದರಿಗೆ ಆಧ್ಯಾತ್ಮಿಕ ಅನುಭವಗಳು ಮುಖ್ಯವಾದರೆ ಮಾಚಕನೂರ ಅವರಿಗೆ ರಾಜಕೀಯ ಹಾಗೂ ಆಡಳಿತಾತ್ಮಕ ಅನುಭವಗಳು ಮುಖ್ಯವಾಗುತ್ತವೆ. ಒಬ್ಬೊಬ್ಬರದು ಒಂದೊಂದು ಅನುಭವ. ಎಲ್ಲರ ಅನುಭವಗಳು ಒಂದೇ ಇರಲು ಸಾಧ್ಯವಿಲ್ಲ. ಐವರು ನೋಡಿದ್ದು ಅದೇ ಕೈಲಾಸ, ಅದೇ ಮಾನಸ ಸರೋವರ ಆದರೆ ಅವರವರ ದೃಷ್ಟಿಗಳು ವಿಭಿನ್ನ.

# ಅಧ್ಯಾಯ.೩

## ಕೈಲಾಸ ಕಥನ ವಿನ್ಯಾಸ

೩.೧ ಕೈಲಾಸಕ್ಕೆ ದಾರಿಗಳು
೩.೨ ಲೇಖಕರ ಮಾರ್ಗಗಳು

## ಅಧ್ಯಾಯ.೩

# ಕೈಲಾಸ ಕಥನ ವಿನ್ಯಾಸ

ಭಾರತ ಸರಕಾರ ಆಯೋಜಿಸುವ ಕೈಲಾಸ-ಮಾನಸ ಸರೋವರದ ಯಾತ್ರೆ ಭಾವುಕ ಭಕ್ತಾದಿಗಳಿಗೆ ಹೇಳಿ ಮಾಡಿಸಿದ ಪ್ರವಾಸ, ಹಣವಿದ್ದವರು ಕಠ್ಮಂಡು ಮೂಲಕ ಸುಮಾರು ಒಂದು ಲಕ್ಷ ರೂಪಾಯಿ ವೆಚ್ಚಮಾಡಿ, ಕೈಲಾಸ ಯಾತ್ರೆ ಕೈಗೊಂಡರೆ ಇದರ ಅರ್ಧದಷ್ಟು ವೆಚ್ಚದಲ್ಲಿ ಪಾದಯಾತ್ರೆ ಮೂಲಕ ಭಾರತ ಮಾರ್ಗವಾಗಿಯೇ ಯಾತ್ರೆ ಕೈಗೊಳ್ಳಬಹುದು. ಇನ್ನು ಹೆಚ್ಚು ಹಣವಿದ್ದವರು ಕಠ್ಮಂಡುವಿನಿಂದ ಹೆಲಿಕಾಪ್ಟರ್ ಮೂಲಕ ಯಾತ್ರೆ ಕೈಗೊಳ್ಳುತ್ತಾರೆ. ಕೈಲಾಸ ಪರ್ವತದಿಂದ ಸುಮಾರು ೧೦೦ ಕಿ.ಮೀ. ದೂರವಿರುವ ತಕಲ್‌ಕೋಟ್‌ವರೆಗೆ ಹೆಲಿಕಾಪ್ಟರ್ ಸೌಲಭ್ಯವಿದೆ. ಭಾರತದಿಂದ ಪಾದ ಯಾತ್ರೆ ಮೂಲಕ ಹೊರಡುವ ಯಾತ್ರಾರ್ಥಿಗಳು ದೆಹಲಿಯಿಂದ ಅಲ್ಮೋರಾವರೆಗೆ ರೈಲಿನಲ್ಲಿ ತೆರಳಿ ಅಲ್ಲಿಂದ ಕೆಲ ದೂರ ವಾಹನದಲ್ಲಿ ಹೋಗಿ, ನಂತರ ಹಿಮಾಲಯ ಪರ್ವತವನ್ನು ಹಂತಹಂತವಾಗಿ ಏರುತ್ತ ಅದರ ಬೆರಗು-ಬೆಡಗುಗಳನ್ನು ಸವಿಯುತ್ತ ಸುಮಾರು ಹನ್ನೆರಡು ರಾತ್ರಿ ಅಲ್ಲಲ್ಲಿ ತಂಗಿ ತಕಲ್‌ಕೋಟ್ ಬಂದು ತಲುಪುತ್ತಾರೆ. ಆದರೆ ಇದಕ್ಕೆ ಕೈಕಾಲು ಗಟ್ಟಿ ಮತ್ತು ಧೃಡ ಮನಸ್ಸು ಬೇಕು. ಅಪಾಯಕಾರಿ ಹಿಮಾಲಯದ ಕಡುಕಷ್ಟದ ದಾರಿ ಸವೆಸುತ್ತಾ, ಭೂಕುಸಿತ ಇತ್ಯಾದಿ ಎದುರಿಸುತ್ತಾ ಮೇಲೆ ಹತ್ತುತ್ತಾ ಸಾಗಬೇಕು.

ಹಿಮಾಲಯದ ನಿಜ ವೈಭವ ಅದರ ಜಲರಾಶಿ, ಸಸ್ಯರಾಶಿಯನ್ನು ಕಣ್ಣಾರೆ ಕಾಣಬೇಕಿದ್ದರೆ ಚಾರಣಿಗರಾಗಿಯೇ ಕೈಲಾಸ ಮಾನಸ ಸರೋವರ ಯಾತ್ರೆ ಮಾಡಬೇಕು. ಇದು ಕೈಲಾಸ ಮಾನಸ ಸರೋವರದ ಪರಿಕ್ರಮ ಸೇರಿ ಸುಮಾರು ೨೩೦ ಕಿ.ಮೀ.ನ ಕಾಲ್ನಡಿಗೆ ದಾರಿ, ಮರಳುವಾಗ ಸ್ವಲ್ಪ ಕಡಿಮೆ ಅಂದರೆ ದೆಹಲಿಯಿಂದ ಒಟ್ಟು ೮೬೫ ಕಿ.ಮೀ. ದೂರ. ಕಠ್ಮಂಡುವಿನಿಂದ ಕೈಲಾಸದವರೆಗಿನ ದಾರಿಯ ದೂರ ಸುಮಾರು ೮೫೦ ಕಿ.ಮೀ ಆಗಿರುತ್ತದೆ. ೧೯೯೮ ರಲ್ಲಿ ಕೈಲಾಸ ಮಾನಸ ಸರೋವರದ ಪಾದಯಾತ್ರಿಗಳು ಸುಮಾರು

೧೮೦ ಜನ ಹಿಮಾಲಯದಲ್ಲಿ ಉಂಟಾದ ಭೂಕುಸಿತದಿಂದ ಕಣ್ಮರೆಯಾದದ್ದು ಈ ಯಾತ್ರೆಯ ದೊಡ್ಡ ದುರಂತ. ಇದರಲ್ಲಿ ಬೆಂಗಳೂರಿನ ನಾಟ್ಯ ಗ್ರಾಮದ ಪ್ರತಿಮಾ ಬೇಡಿಯೂ ಸೇರಿದ್ದರು, ಭೂಕುಸಿತ ವೈಪರೀತ್ಯದ ಹವಾಮಾನದಿಂದಾಗಿ ಪ್ರತಿವರ್ಷ ಕೆಲವು ಕೈಲಾಸ ಯಾತ್ರಿಗಳು ಕೈಲಾಸವಾಸಿಯಾಗುವುದು ನಿರಂತರವಾಗಿ ನಡೆದೇ ಇರುತ್ತದೆ. ಆದರೂ ಭಾರತೀಯರ ಪಾಲಿಗೆ ಕೈಲಾಸ ಮಾನಸ ಸರೋವರ ಸದಾ ಆಕರ್ಷಣೀಯ ದೈವಿತಾಣವಾಗಿಯೇ ಉಳಿದಿದೆ.[೧]

**೩.೧ ಕೈಲಾಸಕ್ಕೆ ದಾರಿಗಳು :**

೧)ನೇರ ಕಾಲ್ನಡಿಗೆಯ ದಾರಿ

೨)ಸುತ್ತು ಬಳಸಿನ ದಾರಿ

೩)ವಾಯುಯಾನದ ದಾರಿ

ಹೆಲಿಕಾಪ್ಟರ್‌ದಲ್ಲಿ ಹಾರಿ ಕೈಲಾಸ ದರ್ಶನ ಮಾಡಬಹುದು. ಆದರೆ ಅದು ಪ್ರವಾಸವಾಗದು, ಪ್ರವಾಸದ ಮೋಜು ಅನುಭವಿಸಬೇಕೆನ್ನುವ ಅಭಿಲಾಷಿಗಳಿಗೆ ಸುತ್ತು ಬಳಿಸಿನ ದಾರಿಯೇ ಸೂಕ್ತ.

ವೆಂಕಟೇಶ ಮಾಚಕನೂರರು ಪ್ರಾರಂಭದಲ್ಲಿ ಆಯ್ದುಕೊಂಡಿದ್ದು ವಿಮಾನಯಾನ ಪ್ರಯಾಣ ಬೆಂಗಳೂರಿನಿಂದ ದೆಹಲಿ, ದೆಹಲಿಯಿಂದ ಕಠ್ಮಂಡುವಿಗೆ ಪ್ರಯಾಣ, ಇವರು ಪ್ರಯಾಣ ಬೆಳೆಸಿದ್ದು ಖಾಸಗಿ ಪ್ರವಾಸಿ ಸಂಸ್ಥೆಯ ಮುಖಾಂತರ ಇವರ ಕೈಲಾಸ ಮಾನಸ ಯಾತ್ರೆ ಅಷ್ಟೊಂದು ಪ್ರಯಾಸದಾಯಕವಾಗಿರಲಿಲ್ಲ. ಆದರೆ ಸರ್ಕಾರ ಏರ್ಪಡಿಸುವ ಯಾತ್ರೆಯ ಮಾರ್ಗವು ದುರ್ಗಮವಾಗಿರುತ್ತದೆ ಎಂಬುದು ವೆಂಕಟೇಶ ಮಾಚಕನೂರರ ಅಭಿಪ್ರಾಯವಾಗಿದೆ. ಇದು ಪರಿಶ್ರಮದ ಕಾಲ್ನಡಿಗೆಯೂ ಕೂಡಾ ಹೌದು. ಪರ್ವತ ಏರುವ ಒತ್ತಡವನ್ನು ಸಹಿಸಿಕೊಳ್ಳುವ ಆರೋಗ್ಯ ಕ್ಷಮತೆ ಬೇಕಾಗುತ್ತದೆ.

ಮಾಚಕನೂರರು ಹೊರಟಿದ್ದು ನೇಪಾಳದ ಮುಖಾಂತರ ರಸ್ತೆ ಮಾರ್ಗವಾಗಿದ್ದರಿಂದ ಅಷ್ಟು ಶ್ರಮದಾಯಕವಲ್ಲದಿದ್ದರೂ ಈ ದಾರಿಯಲ್ಲಿ ತೊಂದರೆಗಳು ಅನೇಕವಾಗಿದ್ದವು. ಜೊತೆಗೆ ತುಂಬ ಬಳಸುದಾರಿ ವೆಂಕಟೇಶರವರ ಅಭಿಪ್ರಾಯದಂತೆ "ಗುಡ್ಡ ಸುತ್ತಿ ಮೈಲಾರಕ್ಕೆ ಹೋದಂತೆ" ಆದರೆ ಇದು ಆರೋಗ್ಯದ ದೃಷ್ಟಿಯಿಂದ ಕಾಲ್ನಡಿಗೆಯ ಮಾರ್ಗವೇ ಹೆಚ್ಚು ಸೂಕ್ತವೆಂಬುದು ಅವರ ಅಭಿಪ್ರಾಯ. ಜೊತೆಗೆ ದೇಹ ಎತ್ತರದ

೧. ಶ್ರೀ ವೆಂಕಟೇಶ ಮಾಚಕನೂರ. 'ಕೈಲಾಸ ಮಾನಸ' ಪು.ಸಂ.೬೮-೬೯

ಪ್ರದೇಶದಲ್ಲಿ ಒಗ್ಗಿಕೊಳ್ಳಲು ಸಮಯಬೇಕಾಗುತ್ತದೆ. ವಾತಾವರಣದಲ್ಲಿ ಆಗುವ ವ್ಯತ್ಯಾಸಗಳಿಗೆ ದೇಹ ಒಗ್ಗಿಕೊಳ್ಳಲು ಕಷ್ಟವಾಗುವುದರಿಂದ ನಿಧಾನಕ್ಕೆ ಪಯಣಿಸಿ ಮೇಲ್ಮಟ್ಟದ ಭೂ ಪ್ರದೇಶಕ್ಕೆ ಶರೀರವನ್ನು ಒಗ್ಗಿಸುವುದೇ ಸೂಕ್ತವೆಂದು ಹೇಳಲಾಗುತ್ತದೆ.

ಮಾಚಕನೂರರು ತಿಳಿಸುವಂತೆ ಮೌಂಟ್ ಎವ್ವರೆಸ್ಟ್ ಏರಲು ಮೂರು ದಾರಿಗಳಿವೆಯಂತೆ ಅವು

೧)ದಕ್ಷಿಣಕ್ಕೆ ನೇಪಾಳ ಕಡೆಯಿಂದ

೨)ಉತ್ತರಕ್ಕೆ ಟಿಬೆಟ್ ಕಡೆಯಿಂದ

೩)ಆಗ್ನೇಯ ದಿಕ್ಕಿನಿಂದ

ಈ ಮಾರ್ಗಗಳು ಕಷ್ಟತಮವಾಗಿವೆ. ಏನೇ ಆದರೂ ಪ್ರವಾಸವು ಮೂರು ಮುಖಗಳಲ್ಲಿ ಸಾಗುತ್ತದೆ.

ಒಂದು ಅಧೋಮುಖಿ

ಎರಡು ಸಮತಲಮುಖಿ

ಮೂರು ಊರ್ಧ್ವಮುಖಿ

ಮಾದಕ ಮತ್ತು ಲೈಂಗಿಕಾದಿ ಪ್ರಪಂಚದಲ್ಲಿ ತನ್ನನ್ನು ತಾನು ಮರೆಯಲೂ, ಮೀರಲೂ ಮಾನವ ಕೈಗೊಳ್ಳುವ ಸಾಹಸಗಳೆಲ್ಲ ಅಧೋಮುಖಿ ಪ್ರವಾಸಕ್ಕೆ ಸೇರುತ್ತವೆ. ಅದರ ಪರಿಣಾಮ ಮೊದಮೊದಲು ಸ್ವಾದವಾದರೂ ತುದಿಯಲ್ಲಿ ಕೇಡು. ತನಗೆ, ತನ್ನ ಸಮಾಜಕ್ಕೆ, ತನ್ನ ನಾಡಿಗೆ, ಸಾಹಿತ್ಯ, ಸಂಗೀತ, ಕಲೆ, ಲೋಕವೊಪ್ಪುವ ಅಥವಾ ಮೆಚ್ಚುವ ಯಾವುದಾದರೊಂದು ಸುಧಾರಣೆಯ ಚಳುವಳಿ, ರಾಜಕಾರಣ, ರಾಜಸಭೆ ಮತ್ತು ಪರಿಷತ್ತುಗಳಲ್ಲಿ ಭಾಗವಹಿಸುವುದು, ದೇಶಭಕ್ತಿಯ ಅಥವಾ ದೇಶ ರಕ್ಷಣೆಯ ಅಥವಾ ಸಮಾಜ ಸೇವೆಯ ಚಟುವಟಿಕೆಗಳಲ್ಲಿ ಆಸಕ್ತನಾಗುವುದು. ನಮ್ಮ ಸುತ್ತ-ಮುತ್ತ ದಿನವೂ ನಡೆಯುತ್ತಿರುವ ನೂರಾರು ವ್ಯಾಪಾರಗಳಲ್ಲಿ ಮನಃಪೂರ್ವಕವಾಗಿ ಮುಳುಗುವುದೇ ನಮ್ಮನ್ನು ನಾವು ಮರೆಯುವುದು ಸಮತಲಮುಖಿ ಪ್ರವಾಸ. ಸ್ವಾಮಿ ಸೋಮನಾಥಾನಂದರ ಪ್ರಕಾರ ಪ್ರವಾಸವು ಆಧ್ಯಾತ್ಮಿಕ ಶ್ರೇಯಸ್ಸೇ ಧ್ಯೇಯವಾಗಿ ಸಮಸ್ತ ಪ್ರಜ್ಞೆಯ ಪೂರ್ಣ ಸಮರ್ಪಣವೇ ದಾರಿಯಾಗಿ ಪೂರ್ಣತೆಯ ಅನುಸಂಧಾನಕ್ಕಾಗಿ ಮನುಷ್ಯ ಕೈಗೊಳ್ಳುವ ಅತ್ಯಪೂರ್ವ ಸಾಹಸವೇ ಅತ್ಯಂತ ವಿರಳವಾದ ಊರ್ಧ್ವಮುಖಿ ಪ್ರವಾಸ.

**೩.೨ ಲೇಖಕರ ಮಾರ್ಗಗಳು :**

ಸ್ವಾಮಿ ಸೋಮನಾಥಾನಂದರು ಅಮರನಾಥಕ್ಕೆ ಹೋಗಬೇಕೆಂಬ ಬಯಕೆ ಇದ್ದುದರಿಂದ ಅವರು ಕಾಶ್ಮೀರದ ಮಾರ್ಗವನ್ನು ಆಯ್ಕೆಮಾಡಿಕೊಳ್ಳುವರು. ಅಲ್ಲಿ ಸ್ವಾಮಿ

ವಿವೇಕಾನಂದರು ಸಂದರ್ಶಿಸಿದ್ದು, ಅವರು ಕಾಲಿಟ್ಟ ಸ್ಥಳವದು. ಅವರು ಪೂಜಿಸಿದ ದೇವರು ಮಿಂದ ತೀರ್ಥ ಅಮರನಾಥದಲ್ಲಿತ್ತು. ಹೀಗಾಗಿ ಕೈಲಾಸ ಮಾನಸಕ್ಕೆ ಹೋಗಲು ಅಮರನಾಥದ ಮುಖಾಂತರ ಪ್ರವಾಸ ಬೆಳೆಸುವರು. ಇನ್ನೊಂದು ಕಾರಣವು ಇತ್ತು ಇದಕ್ಕೆ. ಕಾಲುನಡಿಗೆಯಲ್ಲಿ ಬಹುದೂರ ಹೋಗಬೇಕಾಗಿರಲಿಲ್ಲ. ಸ್ವಾಮಿ ಸೋಮನಾಥಾನಂದರು ಪ್ರಯಾಣ ಬೆಳೆಸಿದ್ದು ಮೈಸೂರಿನಿಂದ ೧೯೫೦ ಜುಲೈ-೫ ರಂದು ರೈಲುಗಾಡಿ ಮುಖಾಂತರ ದೆಹಲಿವರೆಗೆ, ದೆಹಲಿಯಿಂದ ಪಠಾನಕೋಟೆ ಕಾಶ್ಮೀರದ ಕಣಿವೆಗಳನ್ನು ಸುತ್ತುತ್ತ ಪಹಿಲ್‌ಗಾಂವ್ ಎಂಬ ಸ್ಥಳದಲ್ಲಿ ನೀರಿನ ಚಿಲುಮೆ ಸಿಕ್ಕುತ್ತದೆ. ಅದರ ಐತಿಹಾಸಿಕ ಮಹತ್ವವನ್ನ ಮೆಲುಕುಹಾಕುತ್ತ ಸಾಗುತ್ತದೆ. ಇವರ ಪ್ರಯಾಣವು ಧಾರ್ಮಿಕವೂ, ಆಧ್ಯಾತ್ಮಿಕವೂ ಐತಿಹಾಸಿಕವೂ ನಿಸರ್ಗ ಪ್ರೇಮಮಯವೂ ಆಗಿದೆ. ಚಂದನವಾಡಿ, ಶೇಷನಾಗದ ಮುಖಾಂತರ ಅಮರನಾಥಕ್ಕೆ ಹೋಗುತ್ತಾರೆ.

ಮಮತಾರಾವ್‌ರವರು ಮುಂಬಯಿಯಿಂದ ದೆಹಲಿಯವರೆಗೆ ಅವರು ರೈಲು ಪ್ರಯಾಣವನ್ನು ಮುಂದುವರಿಸಿ ದೆಹಲಿಯಿಂದ ಅಲ್ಮೋರಾವರೆಗೆ ಸುಖಾಸೀನ ಬಸ್ಸಿನಲ್ಲಿ ಇವರು ಮಕ್ಕಳಂತೆ ಉತ್ಸಾಹ ತುಂಬಿ ಜಿಗಿದಾಡುವಂತೆ ಉತ್ಸಾಹಭರಿತರಾಗಿ ಗಾಝಿಯಾಬಾದ ಮೂಲಕ ಬೇಸ್ ಕ್ಯಾಂಪ್ ದಾರ್ಚುಲಾ- ಸುಮಾರು ೬೮೦ ಕಿ.ಮೀ ದೂರ ಸಾಗಿದ ನಂತರ ದಾರ್ಚುಲಾನಿಂದ ೨೯೦ ಕಿ.ಮೀ ದೂರದ ಕಾಠ್ ಗೋದಾಮ್ ತಲುಪುತ್ತಾರೆ. ಈ ಕಾಠ್ ಗೋದಾಮ್ ಒಂದು ಕಾಲಕ್ಕೆ ಬಹುದೊಡ್ಡ ವ್ಯಾಪಾರ ಕೇಂದ್ರವಾಗಿತ್ತು. ಇದರ ಐತಿಹಾಸಿಕ ಹಿನ್ನೆಲೆಯನ್ನು ಮೆಲುಕುಹಾಕುತ್ತ ಕೈಲಾಸ ಮಾನಸಕ್ಕೆ ಪ್ರಯಾಣ ಬೆಳೆಸಿದವರು. ಕಾಠ್ ಗೋದಾಮ್ ಕೊನೆಯ ರೈಲ್ವೆ ನಿಲ್ದಾಣವು ಕೂಡಾ ಆಗಿತ್ತು. ಹಿಮಾಲಯದ ಶಿವಾಲಿಕ ಪರ್ವತ ಶ್ರೇಣಿಗಳಲ್ಲಿರುವ ಜಗತ್ಪ್ರಸಿದ್ಧ ನೈನಿತಾಲ, ಅಲ್ಮೋರಾ ಕಡೆ ಹೋಗಬೇಕಾದರೆ ರೈಲಿನಿಂದ ಇಳಿದು ಮುಂದಕ್ಕೆ ಬಸ್ಸಿನಲ್ಲಿ ಪ್ರಯಾಣಿಸಬೇಕಾಗುತ್ತದೆ. ನೈನಿತಾಲದಿಂದ ಇಕ್ಕಟ್ಟಾದ ದಾರಿಯಾದ್ದರಿಂದ ಮಿನಿ ಬಸ್ಸ್‌ನ ಪ್ರಯಾಣ ಇದರ ಆಯ್ಕೆಯಾಗುತ್ತದೆ. ಮಿನಿ ಬಸ್ಸ್‌ನಲ್ಲಿ ಕೈಲಾಸ ಮಾನಸಕ್ಕೆ ಪ್ರಯಾಣಿಸುವ ಸಂದರ್ಭದಲ್ಲಿ ಮಮತಾರಾವ್‌ರವರು ನಯನ ಮನೋಹರ ದೃಶ್ಯಗಳನ್ನು ಕಾಣುತ್ತಾರೆ. ಅವು ಧುಮಕುವ ನೀರಿನ ಝುರಿಗಳು, ಎಳೆಬಿಸಿಲಿಗೆ ಶಿವನ ಕೈಯಲ್ಲಿದ್ದ ಅಲಗಿನಂತೆ ಫಳಕ್ಕನೆ ಮಿಂಚಿನಂತೆ ಭಾಸವಾಗುತ್ತಿತ್ತು ಎನ್ನುತ್ತಾರೆ. ಅಲ್ಲದೆ ಮರದ ತುದಿ ಕಾಣದಷ್ಟು ಎತ್ತರದ ದೇವದಾರು ವೃಕ್ಷಗಳು, ನಡು-ನಡುವೆ ಬೆಳೆದಿರುವ ವಿಧ ವಿಧದ ಮರಗಿಡಗಳು, ದೂರ ದೂರದವರೆಗೆ ಕಾಣುವ ಕಣಿವೆಯಲ್ಲಿ-ಬೆಟ್ಟದ ಇಳಿಜಾರುಗಳಲ್ಲಿ ಬೆಟ್ಟಗಳನ್ನು ಕಡಿದು ಮಾಡಲಾದ ಚಿಕ್ಕ ಚಿಕ್ಕ ಚೌಕಾಕಾರದ ಗದ್ದೆಗಳು; ಅಲ್ಲಲ್ಲಿ ಸಾಲಾಗಿ ಪೇರಿಸಿಟ್ಟ ಕಡ್ಡಿ ಪೆಟ್ಟಿಗೆ ಡಬ್ಬಿಗಳಂತೆ ಕಂಡು

ಬರುವ ಪುಟ್ಟ ಪುಟ್ಟ ಮನೆಗಳು ಅವುಗಳ ನಡುವೆ ತಲೆಯೆತ್ತಿ ನಿಂತಿರುವ ದೇವಸ್ಥಾನಗಳ ನೆತ್ತಿಯಲ್ಲಿ ಗಾಳಿಗೆ ಹಾರಾಡುವ ಪತಾಕೆಗಳು, ದಾರಿಯಲ್ಲಿ ಹಾಗೂ ರಸ್ತೆಯ ತಿರುವಿನಲ್ಲಿ ಕಂಡರೆ ನಕ್ಕು ಕೈಬೀಸುವ ಮಹಿಳೆಯರು-ಶಾಲೆಯಿಂದ ಹಿಂದಿರುಗುವ ಮಕ್ಕಳು ಎಲ್ಲ ದೃಶ್ಯವೂ ಎಷ್ಟೊಂದು ಆಹ್ಲಾದಕರವಾಗಿತ್ತು ! ಎಂಬುದನ್ನು ಮನದುಂಬಿ ಹೇಳುತ್ತಾರೆ ಮಮತಾರಾವ್‌ರವರು.

ಭೀಮತಾಲ್ ನೈನಿತಾಲ್ ಮೂಲಕ ಅಲ್ಮೋರಾಕ್ಕೆ ತಲುಪಿದ ಮಮತಾರಾವ್‌ರವರು ಮರುದಿನ ಅಂದರೆ ದಿನಾಂಕ ೦೭-೦೮-೨೦೦೬ ರಂದು ಅಲ್ಮೋರಾದಿಂದ ದಾರ್ಚುಲಾಕ್ಕೆ ತೆರಳುತ್ತಾರೆ. ಈ ದಾರ್ಚುಲಾವು ನೇಪಾಳ ಮತ್ತು ಭಾರತದ ಗಡಿಯಲ್ಲಿರುವ ಸಣ್ಣ ಊರು. ಇಲ್ಲಿ ಇನ್ನೊಂದು ವಿಶೇಷವನ್ನು ಮಮತಾರಾವ್‌ರವರು ಹೇಳುತ್ತಾರೆ. ದಾರ್ಚುಲಾದ ಮಾರುಕಟ್ಟೆಯಲ್ಲಿ ಅಗ್ಗದ ವಿದೇಶಿ ವಸ್ತುಗಳು ಸಿಗುತ್ತವೆ. ಜೊತೆಗೆ ಭಾರತೀಯ ಹಣ ಇಲ್ಲಿ ಚಲಾವಣೆಯಾಗುತ್ತದೆ. ದಾರ್ಚುಲಾದಿಂದ ಮುಂದೆ ಕಾಲ್ನಡಿಗೆ ಜಾಥಾ ಪ್ರಾರಂಭವಾಗುತ್ತದೆ. ಅದು ಘೋಡಾವಾಲಾನ ಜೊತೆಗೆ, ಅವನಿಗೆ ದಿನಕ್ಕೆ ೩೫೦ ರೂ.,ಗಳು ಹೀಗೆ ಇವರು ಲಿಪಿಲೇಕ್ ಪಾಸ್, ಗಾಲಾ, ಬುದಿ, ಗುಂಜಿ ಮತ್ತು ಕಾಲಾಪಾನಿ ಮಾರ್ಗವಾಗಿ ಮುನ್ನಡೆಯುತ್ತಾರೆ.

ಈ ಕಾಲಾಪಾನಿ ಅನ್ನಪೂರ್ಣೇಶ್ವರಿಯ ಸನ್ನಿಧಿ. ಈ ಸನ್ನಿಧಿಯ ಕುರಿತು ಮಮತಾರಾವ್ ಹಾಗೂ ಸ್ವಾಮಿ ಅಖಂಡಾನಂದರು ಕೂಡಾ ಈ ಕಾಲಾಪಾನಿಯ ನಿಸರ್ಗ ಸೊಬಗನ್ನು ವರ್ಣಿಸಿದ್ದುಂಟು, ಆದರೆ ಸ್ವಾಮಿದ್ವಯರು ಹಾಗೂ ಮಮತಾರಾವ್‌ರವರು ಬಳಸಿದ್ದು ಸುತ್ತು ಬಳಸಿನ ಮಾರ್ಗವಾಗಿದೆ. ವೆಂಕಟೇಶ ಮಾಚಕನೂರರ ದಾರಿ ಬಹು ಸರಳ ಎಂದರೆ ತಪ್ಪಾಗಲಾರದು. ಶೇಕಡಾ ೭೫% ದಾರಿಯನ್ನು ಅವರು ವಿಮಾನದ ಮುಖಾಂತರವಾಗಿ ಪ್ರಯಾಣಿಸುತ್ತಾರೆ. ಇಲ್ಲಿ ಅವರಿಗೆ ಸೋಜಿಗ ಎಂದರೆ ಪಾಸ್‌ಪೋರ್ಟ ಮೇಲಿನ 'Cancelled' ಮುದ್ರೆ, ಅದು ಅವರಿಗೆ ಮುಜುಗರವೂ, ಕಷ್ಟದಾಯಕವೂ ಆದ ಸಂಗತಿಯಾಗಿತ್ತು. ಏನೇ ಆದರೂ ನೇಪಾಳ ದೇಶ ಸಂಪೂರ್ಣವಾಗಿ ಹಿಮಾಲಯದ ಮಡಿಲಲ್ಲಿರುವ ದೇಶ. ಎತ್ತರದ ಗಿರಿಶಿಖರಗಳು, ತುಂಬಿ ತುಳುಕುವ ನದಿಗಳು, ಹಿಮದಿಂದಾವೃತವಾದ ಪರ್ವತಗಳ ಮಧ್ಯ ನೇಪಾಳ ಪವಡಿಸಿದೆ ಎನ್ನುತ್ತಾರೆ ಮಾಚಕನೂರರು.

ಕಠ್ಮಂಡುವಿನಿಂದ ನಾಲ್ಯಂವರೆಗೆ ಜೀಪಿನಲ್ಲಿ ಪ್ರಯಾಣ ಬೆಳಸಿ ಸಾಗಾ ತಲುಪುತ್ತಾರೆ. ಅಲ್ಲಿಂದ ಲ್ಯಾಂಡ್ ಕ್ರುಜರ್ ಪರ್ಯಾಂಗ್ ತಲುಪುವಾಗ ಸಂಜೆ ಏಳು ಗಂಟೆಯಾಗಿರುತ್ತದೆ. ಮರುದಿನ ಲೇಖಕರ ಪ್ರಯಾಣ ಮಾನಸ ಸರೋವರ. ಅದೇ ವಾಹನದ ಮುಖಾಂತರ

೨೨೫ ಕಿ.ಮೀ. ಚಲಿಸಿ ಇವರ ವಾಹನಗಳು ಮಾನಸ ಸರೋವರದ ಮುಂದೆ ಹೋಗಿ ನಿಲ್ಲುತ್ತದೆ. ಶಿವನ ವಾಸಸ್ಥಾನದ ದರ್ಶನದಿಂದ ಕಣ್ತುಂಬಿಕೊಳ್ಳುವ ಅವಕಾಶ ಇವರದು.

ಕೆ. ಸತ್ಯನಾರಾಯಣರು ಕೈಲಾಸ ಮಾನಸಕ್ಕೆ ಹೆಚ್ಚು ಕಡಿಮೆ ಭಾರದ ಮುಖಾಂತರ ಸುತ್ತು ಬಳಸಿನ ದಾರಿಯಲ್ಲಿ ಟಿಬೇಟ ಮುಖಾಂತರ ಅಂದರೆ ಚೀನಾ ಮಾರ್ಗವಾಗಿ ಚಲಿಸುತ್ತಾರೆ. ತಕಲ್‌ಕೋಟೆ ತಲುಪಿದಾಗ ಅದರ ಪಕ್ಕದಲ್ಲಿದ್ದ ಕೋಜಾರನಾಥ ಎಂಬ ಗ್ರಾಮದ ಪುರಾತನ ದೇವಸ್ಥಾನ. ಅಲ್ಲಿನ ರಾಮ-ಲಕ್ಷ್ಮಣ ಸೀತೆಯರ ವಿಗ್ರಹಗಳನ್ನು ಪರಿಚಯಿಸುವರು. ಈ ಸಂದರ್ಭದಲ್ಲಿ ಇವರು ಕಂಡ ಇನ್ನೊಂದು ದೃಶ್ಯವನ್ನು ಅಭಿವ್ಯಕ್ತಪಡಿಸುವರು. ಟಿಬೇಟನಲ್ಲಿ ಮನುಷ್ಯರಿಗಿಂತ ವಾಹನಗಳು ಹೆಚ್ಚು, ವಾಹನಗಳಿಗಿಂತ ಬಿಯರ್ ಬಾಟಲುಗಳು ಹೆಚ್ಚು, ಬಿಯರ್ ಬಾಟಲಿಗಳಿಗಿಂತ ಸಿಗರೇಟ್ ಪ್ಯಾಕ್‌ಗಳು ಹೆಚ್ಚಾಗಿದ್ದವು ಎನ್ನುತ್ತಾರೆ. ಹೀಗೆ ಹಿಮಾಲಯಕ್ಕೆ ಕ್ರಮಿಸಿದರೂ ಸ್ತ್ರೀಕಂಠಯ್ಯಗಳು ಇರುವವರೆ, ಶಿವನ ಸಾನಿಧ್ಯದಲ್ಲಿ ಸಾಕ್ಷಾತ್ಕಾರದ ಮನೊಭಾವವನ್ನು ಬಿಟ್ಟು ಹೆಂಗಸರ ಚೇಲಾ ಆಗುವವರ ಕುರಿತು ವಿಷಾದವ್ಯಕ್ತಪಡಿಸುತ್ತಾರೆ. ಲೇಖಕರ ಪ್ರವಾಸದ ಮಾರ್ಗಗಳು ಭಿನ್ನವಾಗಿರುವುದರ ಜೊತೆಗೆ ಅವರು ಆ ಸಂದರ್ಭದಲ್ಲಿ ಅಭಿವ್ಯಕ್ತಪಡಿಸಿದ ಭಾವನೆ ನಿಸರ್ಗ ಸೌಂದರ್ಯ, ವಾತಾವರಣ ಇವೆಲ್ಲವೂ ಭಿನ್ನತೆಯಿಂದ ಕೂಡಿರುವುದನ್ನು ಅವರವರ ಬರವಣಿಗೆಯ ಶೈಲಿಯಲ್ಲಿ ಭಿನ್ನವಾಗಿರುವುದು ಕಂಡುಬರುತ್ತದೆ. ಹಾಗೆಯೆ ಕೈಲಾಸ ಮಾನಸವು ನಾಲ್ಕು ಧರ್ಮಗಳ ಆಧ್ಯಾತ್ಮಿಕ ಕೇಂದ್ರವಾಗಿದ್ದು, ಹಿಂದೂ, ಬೌದ್ಧ, ಜೈನ ಮತ್ತು ಬೋನ್ಪೋ ಈ ಧರ್ಮಗಳ ಅನುಯಾಯಿಗಳಿಗೆ ಕೈಲಾಸ ಪರ್ವತ ಪವಿತ್ರ ನೆಲೆ ಎಂಬುದನ್ನು ಅಭಿವ್ಯಕ್ತ ಪಡಿಸುತ್ತಾರೆ.

# ಅಧ್ಯಾಯ.೪

## ಯಾತ್ರೆಯ ಅನನ್ಯತೆ ಹಾಗೂ ಧನ್ಯತೆ

೪.೧ ಪ್ರವಾಸಿಗರ ಧನ್ಯತೆಯ ಸಂಗತಿಗಳು
೪.೨ ಅನನ್ಯತೆಯ ಪ್ರಸಂಗಗಳು
೪.೩ ಧನ್ಯತೆಯ ಪ್ರಸಂಗಗಳು
೪.೪ ಪರಿಸರ ತಾದ್ಯಾತ್ಮತೆ

# ಅಧ್ಯಾಯ – ೪

# ಯಾತ್ರೆಯ ಅನನ್ಯತೆ ಹಾಗೂ ಧನ್ಯತೆ

## ೪.೧ ಪ್ರವಾಸಿಗರ ಧನ್ಯತೆಯ ಸಂಗತಿಗಳು :

'ಪ್ರವಾಸ ಮಾಡುವುದು ಒಳ್ಳೆಯದು ಹಾಗೆ ಪ್ರವಾಸ ಮಾಡಲಾರದೇ ಹೋದಾಗ ಪ್ರವಾಸದ ಬಗೆಗೆ ಬಂದಿರುವ ಸಾಹಿತ್ಯವನ್ನಾದರೂ ಓದುವುದು ಉತ್ತಮ ಹವ್ಯಾಸ' ಎಂಬುದು ಜವಾಹರಲಾಲ ನೆಹರೂರವರ ಸಂದೇಶವಾಗಿತ್ತು. "ಕೋಶ ಓದು ಇಲ್ಲವೆ ದೇಶ ಸುತ್ತು" ಎಂಬುದು ಕನ್ನಡದ ಸುಪ್ರಸಿದ್ದ ಗಾದೆ ಮಾತು ಕೂಡಾ ಪ್ರವಾಸಕ್ಕೆ ಹುರಿದುಂಬಿಸುತ್ತದೆ.

ಭಾರತೀಯರಿಗೆ, ಹಾಗೆಯೆ ಕನ್ನಡರಿಗೆ ಕೈಲಾಸ ಮಾನಸದ ಪ್ರದೇಶದ ಅನುಭವ ಧಾರ್ಮಿಕ ಪರೀಧಿಯೊಳಗೆ ಒಂದು ಅನುಭೂತಿಯನ್ನುಂಟು ಮಾಡುವ ಅನುಭವ, ವಿಶೇಷವಾಗಿ ಡೋಲ್ಮಲಾಪಾಸ ಪ್ರವೇಶಿಸಿದಾಗ ಅಲ್ಲಿನ ಶ್ರಮಸಾಧ್ಯವಾದ ಪ್ರಯಾಣ, ಹಿತಕರವಾದ ಹವಾಮಾನ ಯೋಗಿಯ ಮನಸ್ಥಿತಿಯನ್ನು ತಂದು ಕೊಡುತ್ತದೆ. ಅಲ್ಲಿನ ಪರಿಸರ ಸುಖವೂ ಇಲ್ಲದ, ದುಃಖವೂ ಇಲ್ಲದ, ಅದೊಂದು ಅಪೂರ್ವ ಆನಂದದ ಕ್ಷಣ, ಅದನ್ನು ಅನುಭವಿಸುವ ಅನುಭೂತಿ ಬಹುಮಟ್ಟಿಗೆ ಎಲ್ಲ ಯಾತ್ರಾರ್ಥಿಗಳಿಗೆ ಆಗುವ ಒಂದು ವಿಶಿಷ್ಟ ಅನುಭವ. ಇದು ಆತ್ಮಾನಂದದ ಸುಖ. ಇಂತಹ ಸುಖದ ಅನುಭವಕ್ಕೆ ಕಾರಣವಾಗಿರುವ ಕೈಲಾಸ ಮಾನಸ ಮತ್ತು ಹಿಮಾಲಯ ಪರ್ವತ ಶ್ರೇಣಿಯೊಡನೆ ಭಾರತೀಯರ ಭಾವನಾತ್ಮಕ ಸಂಬಂಧವನ್ನು ಪೌರಾಣಿಕ ಹಾಗೂ ಐತಿಹಾಸಿಕ ಹಿನ್ನೆಲೆಯಲ್ಲಿ ಮನೋಜ್ಞವಾಗಿ ನಿರೂಪಿಸಿದ್ದಾರೆ.

ಕೈಲಾಸ ಮಾನಸ ಕುರಿತು ನಿಷ್ಕಾಮ ಭಾವದಿಂದ ಈ ಪ್ರದೇಶದಲ್ಲಿರುವ ಸ್ಥಾಣು ಮಂದಿರ ಪ್ರವೇಶಿಸಿದರೆ ಮಾನವನು ಸರ್ವಪಾತಕಗಳಿಂದ ಮುಕ್ತನಾಗಿ ಪರಮ ಶ್ರೇಷ್ಠ ಪದವಿಯನ್ನು ಹೊಂದುತ್ತಾನೆ.[೧] ಮಹಾಭಾರತದ ಕಾಲದ ಯುದ್ಧ ಪೂರ್ವ ಶ್ರೀ ಕೃಷ್ಣನು ಎಲ್ಲ ಪಾಂಡವರ ಸಮೇತ ಸ್ಥಾಣು ಮಹಾದೇವರ ಪೂಜೆ ಮಾಡಿದ್ದನು. ಇಲ್ಲಿಯ ತೀರ್ಥದಿಂದ ಮಹಾರಾಜ ವೇಣುವಿನ ಕುಷ್ಠರೋಗ ದೂರವಾಯಿತು. ಕುರುಕ್ಷೇತ್ರಕ್ಕೆ ಬಂದು ಸ್ಥಾಣುಶಿವನ ದರ್ಶನ ವಂಚಿತನಾದರೆ ಅವನ ಯಾತ್ರೆ ಅಪೂರ್ಣವಾಗುತ್ತದೆ ಎನ್ನುವ ಧನ್ಯತಾಭಾವ ಗುರುಬಸವ ಸುತರ ಅಭಿಪ್ರಾಯವಾಗಿದೆ.

ಹಿಮದಿಂದ ಆವೃತವಾದ ಅನ್ನಪೂರ್ಣ ಪರ್ವತದ ಸಾಲು ಇಲ್ಲಿ ಇನ್ನೂ ನೋಡಲು ಲಭ್ಯವಿದೆ. ಹೋಲಿಸಲು ಅಸಾಧ್ಯವಾಗದಷ್ಟು ಘನೀಕೃತವಾದ ಬೃಹತ್ ಮಂಜುಗಡ್ಡೆಯ ರಾಶಿಗಳಿಂದ ಆವೃತವಾಗಿ ಮೊನಚಾಗಿರುವ ಈ ಶಿಖರಗಳಲ್ಲಿ ಶಿವನನ್ನು ಕುರಿತಾದ ಮಂತ್ರಗಳು ಕೂಡ ಸಾಕಾರಗೊಂಡಿವೆಯೇನೋ ಎಂದೆನಿಸುತ್ತದೆ. ಯಾತ್ರಿಗಳಿಗೆ ಇಲ್ಲಿ ನಿಸರ್ಗದ ದಿವ್ಯ ಭವ್ಯ ಸ್ವಾಗತ ಕಾದಿದೆ. ಶಿವನ ಆಕಾರದ ಒಂದು ಬೆಟ್ಟ ಇಲ್ಲಿ ಮೈದಳೆದಿದೆ. ಪ್ರಕೃತಿದತ್ತವಾಗಿ ನಿರ್ಮಾಣಗೊಂಡಿರುವ ಭಗವಂತನ ದೇಹಾಕಾರವನ್ನು ಹೋಲುವ ಬಂಡೆ, ಇದು ಈ ಪವಿತ್ರ ದೃಶ್ಯದಿಂದ ಪುನೀತರಾಗುವ ಯಾತ್ರಿಗಳಿಗೆ 'ಕುಮಾವು ಮಂಡಲವಿಕಾಸ' ನಿಗಮವು ಮಾಡಿರುವ ವ್ಯವಸ್ಥೆಗಳ ಬಗ್ಗೆ ಪರಿಚಯ ದೊರಕುತ್ತದೆ. ಸಂಜೆ ಭಜನೆ ಆರತಿ ನಡೆಯುತ್ತವೆ. ಸೇನೆಯ ಯೋಧರೂ ಇದರಲ್ಲಿ ಭಾಗವಹಿಸುತ್ತಾರೆ. ಸ್ವಾಮಿಗಳೊಬ್ಬರು ಪಾರಾಯಣ ಮಾಡಿದ 'ಆದಿತ್ಯ ಹೃದಯ' ಸ್ತೋತ್ರವನ್ನು ಕೇಳುತ್ತಾ ಯಾತ್ರಿಗಳು ಅನ್ನಪೂರ್ಣ ಶಿಖರದಲ್ಲಿ ಸೂರ್ಯೋದಯವನ್ನು ವೀಕ್ಷಿಸುತ್ತಾರೆ. ಹರಹರ ಮಹಾದೇವ 'ಓಂ ನಮಃ ಶಿವಾಯ' ಘೋಷದೊಂದಿಗೆ ಅಲ್ಲಿಂದ ತಮ್ಮ ಮುಂದಿನ ನೆಲೆಯಾದ ಕಾಲಾಪಾನಿಗೆ ಹೊರಡುವ ಪರಿಯು ವಿವಿಧ ಕೃತಿಗಳಲ್ಲಿ ಕಂಡುಬರುತ್ತದೆ.

ಪ್ರವಾಸಿಗರು ಪರ್ವತದ ಎದುರಿಗೆ ಮೂಕವಿಸ್ಮಿತರಾಗಿ ನಿಂತು, ಶಿವನ ಸಾನಿಧ್ಯವನ್ನು ಅನುಭವಿಸುತ್ತಿದ್ದರು, ಎಂಥವರಿಗೂ ಒಂದು ದಿವ್ಯ ಅನುಭೂತಿಯ ಕ್ಷಣವಿದು. ಲೇಖಕರು ನೋಡುತ್ತಿದ್ದುದು ಕೈಲಾಸ ಪರ್ವತದ ಸಾಮಾನ್ಯ ಜನಪ್ರಿಯ ಮುಖ ಅದು, ಎದುರಿಗೆ ವಿಭೂತಿಯ ಮೂರು ಗೆರೆಗಳು ಕಾಣುವಂತೆ ಆಕಾರ ಒಂದು ಕಡೆಯಾದರೆ ಓಂ ಆಕಾರ ಇನ್ನೊಂದು ಕಡೆ. ಈ ಪ್ರಸಂಗಗಳು ಎಂಥವರಿಗೂ ಧನ್ಯತಾ ಭಾವಗಳನ್ನು ಸ್ಫುರಿಸುವಂಥಹವುಗಳು, ಅಲ್ಲಿಂದ ಕೈಲಾಸ ಪರ್ವತವನ್ನು ನೋಡುತ್ತಿದ್ದಂತೆ ದೇಹದ

೧. ಗುರುಬಸವ ಸುತ. ಹಿಮಾಲಯ ಕ್ಷೇತ್ರದರ್ಶನ–ಪು.ಸಂ–೫೬

ದಣಿವೆಲ್ಲ ದೂರವಾಗಿ ಶಿವನ ಸಾನಿಧ್ಯವನ್ನು ಅನುಭವಿಸುತ್ತಾ ಅನಿರ್ವಚನೀಯ ಆನಂದ ಅನುಭವಿಸುತ್ತಿದ್ದರು. ಭಾವುಕ ಭಕ್ತರ ಅದೊಂದು ಜೀವಮಾನದ ಅನನ್ಯ ಆನಂದದ ಕ್ಷಣ. ಪ್ರವಾಸಿಗರು ಆನಂದ ಬಾಷ್ಪವನ್ನು ಶಿವನಿಗೆ ಅರ್ಪಿಸಿ ಧನ್ಯರಾಗುತ್ತಿದ್ದರು.[೨]

ಹಿಮಾಲಯದ ಮಡಿಲಲ್ಲಿ ಪ್ರವಾಸ ಸಾಹಿತ್ಯದಲ್ಲಿ ಶ್ರೀ ಸ್ವಾಮಿ ಅಖಂಡಾನಂದರು ಈ ರೀತಿ ನದಿಗಳ ಸುತ್ತುವರಿಕೆಯನ್ನು ಕಂಡು ಧನ್ಯತೆಯನ್ನು ಅಭಿವ್ಯಕ್ತಿಗೊಳಿಸುತ್ತಾರೆ. ಪವಿತ್ರ ಹಿಮಾಲಯದ ಈ ಸುಂದರ ದೃಶ್ಯಗಳನ್ನು ನೋಡಿ ಆನಂದಿಸುತ್ತ ಸ್ವಾಮಿ ಅಖಂಡಾನಂದರು ತ್ರಿಯೂಗೀನಾರಾಯಣದಿಂದ ಗೌರಿಕುಂಡಕ್ಕೆ ಸಾಗುತ್ತಿದ್ದಾಗ ದಾರಿಯಲ್ಲಿ ಮಂದಾಕಿನಿ ಮತ್ತು ಕಾಳಿ, ಗಂಗಾ ನದಿಯ ನೀರು ಆಕರ್ಷಕವಾದ ನೀಲಿ ಬಣ್ಣವನ್ನು ಹೊಂದಿತ್ತು. 'ಕಾಳಿ' ಎಂಬ ಹೆಸರನ್ನು ಈ ನದಿಗೆ ಕೊಟ್ಟಿರುವುದು, ಅದೆಷ್ಟು ಚೆನ್ನಾಗಿ ಒಪ್ಪುತ್ತದೆ ! ಸ್ವಾಮಿ ಅಖಂಡಾನಂದರು ಸಂಗಮಸ್ಥಳದಲ್ಲಿ ಒಂದು ಮುಳುಗು ಹಾಕಿ ಸ್ನಾನ ಮಾಡಿದಾಗ ಮನಸ್ಸಿಗೆ ಪರಿಪೂರ್ಣ ಶಾಂತಿ ಎನ್ನಿಸಿತು. ಒಂದಿನಿತು ವಿಶ್ರಾಂತಿಯಿಂದ ಮೈಯಲ್ಲಿ ಹೊಸ ಶಕ್ತಿ ಮೂಡಿಬಂದಿತು.

ಮಂದಾಕಿನಿ ಮತ್ತು ಕಾಳಿ-ಗಂಗಾ-ಹಿಮವಂತನ ಈ ಎರಡು ಹೆಣ್ಣು ಮಕ್ಕಳು ತಮ್ಮ ಪ್ರೀತಿಯ ತಂದೆಯ ರಾಜ್ಯದಲ್ಲಿ ಅಲೆದಾಡುತ್ತಿರುವರು ಎಂದೆನಿಸಿತು. ಬಹುಶಃ ಅವರು ತಮ್ಮ ತಂದೆಯ ರತ್ನಖಚಿತ ಅರಮನೆಯನ್ನು ಬಿಟ್ಟು ಅಲೆದಾಡಲು ಹೋಗಿದ್ದರು, ಅನೇಕ ದಟ್ಟಡವಿಗಳ ಮೂಲಕ ಅವುಗಳ ನಡುವಣ ಮರಗಿಡಗಳಿಲ್ಲದ ಸಮತಲ ಪ್ರದೇಶಗಳ ಮೂಲಕ ಸಾಗಿ ಬಂದು ಪುನಃ ಇಲ್ಲಿ ಅಕ್ಕತಂಗಿಯರು ಒಂದಾಗಿ ಸೇರಿ ಆಲಂಗಿಸಿಕೊಳ್ಳುತ್ತಿರುವರು. ಅವರ ಅಕ್ಕಳಾದ ಕಾಳಿಂದೀ ಅಥವಾ ಯಮುನಾ ಬಹುಶಃ ಈ ತನ್ನ ಅವಳಿ ಜವಳಿ ತಂಗಿಯರನ್ನು ಬಿಟ್ಟು ತನ್ನ ಪ್ರೀತಿಯ ತಂದೆಯ ಮನೆಯನ್ನು ಬಿಟ್ಟು ದೂರದ ನಾಡಿನಲ್ಲಿ ತನ್ನ ಯಾವುದೇ ದಿವ್ಯ ಉದ್ದೇಶವನ್ನು ಸಫಲಗೊಳಿಸಿಕೊಳ್ಳುವುದಕ್ಕಾಗಿ ಪಯಣಿಸುತ್ತಿರಬಹುದು ಎಂದು ಆ ಅವಳಿ ನದಿಗಳ ಕುರಿತಾಗಿ ಸ್ವಾಮಿ ಅಖಂಡಾನಂದರು ಈ ಮೇಲಿನಂತೆ ಪರಿಸರದ ವೈವಿಧ್ಯತೆಯನ್ನು ಕಂಡು ಧನ್ಯತೆಯನ್ನು ಅರ್ಪಿಸುತ್ತಾರೆ.

## ೪.೨. ಅನನ್ಯತೆಯ ಪ್ರಸಂಗಗಳು

ಸ್ವಾಮಿ ಅಖಂಡಾನಂದರು ಕೈಲಾಸ ಮಾನಸಕ್ಕೆ ಪ್ರಯಾಣ ಬೆಳೆಸುವಾಗ ಹರಿದ್ವಾರದಿಂದ ಬದರಿಕಾಶ್ರಮದವರೆಗೆ ಲೇಖಕರು ನೋಡಿದ ಸಂಗಮಗಳೆಲ್ಲವೂ

೨.ವೆಂಕಟೇಶ ಮಾಚಕನೂರ. 'ಕೈಲಾಸ ಮಾನಸ' ಪು.ಸಂ-೮೦, ೮೧

ಭರ್ಜರಿಯಾಗಿದ್ದವು, ವೈಭವದಿಂದ ಕೂಡಿದ್ದವು, ಅನನ್ಯ ಪ್ರಕೃತಿಸೌಂದರ್ಯದ ದಿವ್ಯತಾಣಗಳಾಗಿದ್ದವು. ಅವುಗಳನ್ನು ಜ್ಞಾಪಿಸಿಕೊಳ್ಳುತ್ತಿರುವಂತೆ ತಪೋಮಗ್ನರಾದ ಅಸಂಖ್ಯ ಸಾಧುಸಂತರು ಲೇಖಕರ ಬಗೆಗಣ್ಣ ಮುಂದೆ ಬಂದು ನಿಲ್ಲುವರು. ಆದರೆ ಪವಿತ್ರಗಳಲ್ಲಿ ಪವಿತ್ರವೆನಿಸಿದ ಪ್ರಯಾಗದ ಗಂಗಾ–ಯಮುನಾ ಸಂಗಮದ ವೈಭವ ವರ್ಣನೆಗೆ ಮೀರಿದುದು. ಅದನ್ನು ಭಾರತೀಯ ಸಂಸ್ಕೃತಿಯಲ್ಲಿರುವ ಉತ್ತಮಾಂಶಗಳ ಪರಾಕಾಷ್ಠೆ ಎನ್ನಬಹುದು. ಪ್ರಯಾಗವನ್ನು ಕುರಿತು ಯೋಚಿಸಿದಾಗ ಗತವೈಭವದ ಅನೇಕ ಚಿತ್ರಗಳು ಲೇಖಕರ ಬಗೆಗಣ್ಣ ಮುಂದೆ ತೆರೆದುಕೊಳ್ಳುತ್ತವೆ. ಯಮುನೆಗೆ ತನ್ನದೇ ಆದ ವ್ಯಕ್ತಿತ್ವವಿದೆ. ಪ್ರಯಾಗದ ಆ ಮಹಾಸಂಗಮವನ್ನು ವರ್ಣಿಸದೆ ಅವಳ ಕಥೆಯನ್ನು ಮುಗಿಸುವುದಕ್ಕಾಗದು.[೩]

ಸ್ವಾಮಿ ಸೋಮನಾಥಾನಂದ ಮಹಾರಾಜರ ಪ್ರವಾಸ ಕಥನದಲ್ಲಿ ಜೀವನದ ಕ್ಷಣಗಳನ್ನು ಗುಪ್ತಕಾಶಿಗೆ ಪ್ರಯಾಣ ಬೆಳೆಸುವ ಸಂದರ್ಭದಲ್ಲಿ ದೇವನೊಂದಿಗೆ (ಕೈಲಾಸನಾಥನಲ್ಲಿ) ಅನನ್ಯತೆಯನ್ನು ಪಡೆದುಕೊಳ್ಳುವ ಪ್ರಸಂಗಗಳು ಹೀಗಿವೆ. ದಾರಿಯಲ್ಲಿ ಜನ ಹೆಚ್ಚಿಲ್ಲ, ಒಬ್ಬೊಬ್ಬರೇ ಈ ವಾತಾವರಣದಲ್ಲಿ ನಡೆಯುತ್ತಿರುವಾಗ ಅದರಲ್ಲೂ ಹಿಮಾಲಯದಲ್ಲಿ ಗಂಗಾನದಿಯೊಡನೆ ಹೋಗುತ್ತಿದ್ದರೆ ಮನಸ್ಸು ಸ್ವಭಾವತಃ ಅಂತರ್ಮುಖವಾಗುವುದು. ಸುರುಳಿ ಸುತ್ತಿಕೊಂಡಿರುವ ನಮ್ಮ ಹಿಂದಿನ ಜೀವನವನ್ನೆಲ್ಲ ಬಿಚ್ಚಿ ನೋಡಿದಾಗ ಆಶ್ಚರ್ಯವಾಗುವುದು. ಜೀವನ ಪ್ರಾರಂಭವಾದಾಗ ಎಷ್ಟು ಸವಿಗನಸು ಕಟ್ಟಿಕೊಂಡಿದ್ದೆವೆ. ಏನೇನು ಆಗಬೇಕೆಂದುಕೊಂಡಿದ್ದೆವು ಆದರೆ ಕೆಲವು ವರ್ಷಗಳಾದ ಮೇಲೆ ನಾವು ಬಗೆದುದೊಂದು ಆದುದೊಂದು. ನಾವು ಯಾವುದನ್ನು ಬಾಚಿ ತಬ್ಬಿಕೊಂಡಿದ್ದೆವೋ ಅದನ್ನು ಭಗವಂತ ಕೆಲವು ವೇಳೆ ಬಲತ್ಕಾರವಾಗಿ ಕಿತ್ತೊಗೆದ. ಕೆಲವು ವೇಳೆ ಉಪಾಯದಿಂದ ತೆಗೆದುಕೊಂಡ. ಅವನನ್ನು ಮರೆತ ನಮ್ಮನ್ನು ತನ್ನಡೆಗೆ ಕರೆದುಕೊಳ್ಳಲು ಹಲವು ಜೀವಿಗಳೊಡನೆ ಹಲವು ರೀತಿ ವ್ಯವಹರಿಸುವನು. ದೇವರು ಕಣ್ಣೀರಿನ ದೇವದೂತರನ್ನು ಎಷ್ಟೋ ವೇಳೆ ಕಳುಹಿಸಿದ ದುಃಖದ ಸಾವಿನ, ಸೋಲಿನ ಬೇಹುಗಾರರನ್ನು ಎಷ್ಟೋ ವೇಳೆ ನಮ್ಮೆಡೆಗೆ ಅಟ್ಟಿದ. ಆದರೂ ನಾವು ಕಿವಿಗೊಡಲೊಲ್ಲೆವು, ಅವನ ಕರೆಗೆ ಕ್ರಮೇಣ ಭಗವಂತನ ಕೈವಾಡ ಅದರೊಳಗೆ ಈಗ ಕಾಣುತ್ತದೆ. ಪ್ರಯಾಣ ಮಾಡುವಾಗ ಜನರ ಗೊಂದಲದಿಂದ ದೂರವಿದ್ದು ಜೀವನವನ್ನು ಮತ್ತೊಬ್ಬರಂತೆ ಸಾಕ್ಷಿಯಂತೆ ನೋಡಲು ಅವಕಾಶವಾಗುವುದು. ಯಾತ್ರಿಕರ ತಂಡದವರಲ್ಲಿ ಬಹುಪಾಲು

೩.ಸ್ವಾಮಿ ಅಖಂಡಾನಂದರು. 'ಹಿಮಾಲಯದ ಮಡಿಲಲ್ಲಿ' ಪು.ಸಂ:೮೬–೮೭

ವಯಸ್ಕರು. ಪ್ರಪಂಚದ ಸುಖದುಃಖಗಳಿಗೆ ಸಿಕ್ಕಿ ಜರ್ಝರಿತರಾದವರು "ಸಾಕು ಎರಡು ದಿನದ ಬಾಳುವೆ ನಿನ್ನಡೆಗೆ ಸೇರಿಸಿಕೋ ಶಿವ" ಎಂದು ಹಾರೈಸುವವರ ಸಂಖ್ಯೆಯೆ ಹೆಚ್ಚಾಗಿತ್ತು.

ಕೇದಾರನಾಥ ದೇವಾಲಯಕ್ಕೆ ಹಿಂದೆ ಎರಡು ಫರ್ಲಾಂಗು ದೂರದಲ್ಲಿ ಹಿಮಾವೃತ ಪರ್ವತಗಳ ಪಕ್ಕದಲ್ಲೇ ಶ್ರೀ ಶಂಕರಾಚಾರ್ಯರು ನಿರ್ವಾಣ ಪಡೆದರು ಎಂದು ಅವರ ಸಮಾಧಿ ಮಂದಿರವನ್ನು ತೋರುವರು. ಶ್ರೀ ಶಂಕರಾಚಾರ್ಯರ ಹೆಸರನ್ನು ಇಲ್ಲಿ ಕೇಳಿದರೆ ರೋಮಾಂಚನವಾಗುವುದು, ಅವರು ಹುಟ್ಟಿದ್ದು ಮಲಬಾರಿನ ಮೂಲೆಯ ಕಾಲಡಿಯಲ್ಲಿ ಮೂವತ್ತೆರಡು ವರ್ಷಗಳಲ್ಲಿ ಪ್ರಸ್ಥಾನತ್ರಯಗಳಿಗೆ ಭಾಷ್ಯಾ ಬರೆದು ಅದ್ವೈತವನ್ನು ಪ್ರತಿಪಾದಿಸಿ ಅನೇಕರೊಡನೆ ವಾದಮಾಡಿ ಇದೇ ಭರತಖಂಡವನ್ನು ಸಂಚರಿಸಿ ಹಲವು ಕಡೆ ಮಠಗಳನ್ನು ಸ್ಥಾಪಿಸಿ ಬದರಿಕಾಶ್ರಮದಲ್ಲಿ ದೇವಸ್ಥಾನವನ್ನು ಜೀರ್ಣೋದ್ಧಾರಮಾಡಿ ಅಲ್ಲಿ ಒಂದು ಮಠವನ್ನು ಸ್ಥಾಪಿಸಿ ಕೇದಾರನಾಥಕ್ಕೆ ಬಂದು ನಿರ್ವಾಣ ಪಡೆದರು. ಶ್ರೀ ಶಂಕರಾಚಾರ್ಯರ ಪ್ರಚಂಡ ಪ್ರತಿಭೆಗೂ ಇಲ್ಲಿರುವ ಹಿಮಾಲಯದ ಶಿಖರಗಳಿಗೂ ಒಂದು ಸಾಮ್ಯವಿದೆ. ಪಾಂಡಿತ್ಯದ ಪರಾಕಾಷ್ಠೆಯನ್ನು ಶಂಕರಾಚಾರ್ಯರು ಮುಟ್ಟಿದರು. ಇಲ್ಲಿರುವ ತುಷಾರ ಶಿಖರಗಳು ಪ್ರಪಂಚದಲ್ಲೆಲ್ಲಾ ಎತ್ತರವಾದುವೆಂದು ಪ್ರಖ್ಯಾತವಾಗಿವೆ. ಅವರು ಹಿಮಗಿರಿಯ ಮಡಿಲಲ್ಲಿ ಶಿವನ ಸನ್ನಿಧಿಯಲ್ಲಿ ತಮ್ಮ ಪಾರ್ಥಿವ ಕಳೇಬರವನ್ನು ತೊರೆದರಂತೆ. ಮೊದಲೇ ಪವಿತ್ರ ಶಂಕರಾಚಾರ್ಯರ ಪುಣ್ಯಸ್ಮೃತಿಯಿಂದ ಪವಿತ್ರವಾದಂತಹ ಭಾವ ಮೂಡುತ್ತದೆ. ಆದಕಾರಣವೇ ನಾರದರು ಭಕ್ತಿಸೂತ್ರದಲ್ಲಿ "ತೀರ್ಥಕುರ್ವಂತಿ ತೀರ್ಥಾನಿ" ಎನ್ನುವರು. ಹೀಗೆ ಶಂಕರಾಚಾರ್ಯರ ಕುರಿತಾಗಿ ಅನನ್ಯ ಭಕ್ತಿ ಭಾವವನ್ನು ಪ್ರವಾಸಿಗರು ವ್ಯಕ್ತಪಡಿಸುವರು.[೪]

ತುಂಗನಾಥನ ದೇವಾಲಯದ ಗೋಪುರ ಕಂಡ ಇವರು ಸದ್ಯಕ್ಕೆ ಸೇರಿದೆವಲ್ಲಿ ಎಂದು ತುಂಗನಾಥನಿಗೆ ಜೈಕಾರ ಹಾಕುತ್ತಾ ಆಗಮಿಸುವರು. ಅಲ್ಲಿ ಒಂದು ಸಣ್ಣ ಕೊಳಕ್ಕೆ ಮೇಲಿಂದ ಗೋಮುಖದಲ್ಲಿ ನೀರು ಬೀಳುವುದು ಅದನ್ನು ಆಕಾಶಯಾಮಿನಿ ತೀರ್ಥ ಎನ್ನುವರು. ಅದರಲ್ಲಿ ಮಿಂದವರಿಗೆ ಅನಂತ ಪುಣ್ಯ ಕಾದಿದೆ. ಎಷ್ಟೋ ಪಾಪ ಕ್ಷಯವಾಗುತ್ತದೆ ಎನ್ನುತ್ತಾರೆ. ಆದರೆ ಅದರಿಂದ ಸ್ವಲ್ಪ ಪಾಪವೇನೋ ಕ್ಷಯಸುವುದೆಂದು ನಿಸ್ಸಂದೇಹವಾಗಿ ಹೇಳಬಹುದು. ಅದರಲ್ಲಿ ಒಂದು ಮುಳುಗುಹಾಕಿ ಬಂದರೆ ಚೇತರಿಸಿಕೊಳ್ಳಬೇಕಾದರೆ ಒಂದು ಗಂಟೆ ಬಿಸಿಲು ಕಾಯಬೇಕು. ನೀರು ಅಷ್ಟು ತಂಪಾಗಿರುತ್ತದೆ, ಈ ಪ್ರಾಯಶ್ಚಿತ ಕಳೆದೇ ಕಳೆಯುವುದು. ಆದರೂ ಸ್ವಾಮಿ

---

೪. ಸ್ವಾಮಿ ಸೋಮನಾಥಾನಂದರು. 'ಹಿಮಾಲಯ ಯಾತ್ರೆ' ಪು.ಸಂ–೧೧೬

ಸೋಮನಾಥಾನಂದರು ಸ್ನಾನ ಮಾಡಲಿಲ್ಲ ಅದರ ನೀರನ್ನು ಕೈಯಲ್ಲಿ ಕೊಂಚ ತೆಗೆದುಕೊಂಡು ತಲೆಗೆ ಪ್ರೋಕ್ಷಣೆ ಮಾಡಿಕೊಂಡರು, ಅನಂತರ ತುಂಗನಾಥ ದೇವಾಲಯಕ್ಕೆ ಪ್ರಯಾಣ ಬೆಳೆಸಿ ದೇವಾಲಯ ಕಂಡು ಅನನ್ಯತೆಗಳನ್ನು ವ್ಯಕ್ತಪಡಿಸುವರು.

ಕೈಲಾಸಾಧಿಪತಿಯ ಮನೆಯಂಗಳದಲ್ಲಿ ಎನ್ನುವ ಪ್ರವಾಸ ಕಥನದಲ್ಲಿ ಮಮತಾ ರಾವ್ ಅವರು ಕೈಲಾಸದ ಕುರಿತಾದ ತಮ್ಮ ಅನನ್ಯ ಭಕ್ತಿಭಾವನ್ನು ಹೀಗೆ ಪ್ರಸ್ತುತ ಪಡಿಸುತ್ತಾರೆ. ಪರಮಶಿವನ ವಾಸಸ್ಥಾನ ಎಲ್ಲ ದೇವರೂ ಅವನ ಕೃಪೆಗೆ ಪಾತ್ರರಾಗಬಯಸಿ ಧಾವಿಸಿಬರುವ ಪುಣ್ಯಕ್ಷೇತ್ರವಿದು. ಚಿರಂಜೀವಿಗಳಾದ ಹನುಮಂತ, ಪರಶುರಾಮ, ಅಶ್ವತ್ಥಾಮ, ವಿದುರ, ಕೃಪಾಮುಂತಾದವರು ನೆಲೆಸಿರುವ ಪಾವನಸ್ಥಳವಿದು. ಸಾಧಕರಿಗೆ ಅವರ ದರ್ಶನವಾಗುವುದುಂಟಂತೆ. ಹೆಚ್ಚೇನು ಈ ಯಾತ್ರೆಯಲ್ಲಿ ಸ್ವತಃ ಮಹಾದೇವನು ಕೂಡ ಛದ್ಮವೇಷದಲ್ಲಿ ಬಂದು ಭಕ್ತರಿಗೆ ದರ್ಶನವನ್ನಿಯುತ್ತಾರಂತೆ, ಅವನನ್ನು ಗುರುತಿಸಿದವರೇ ನಿಜವಾದ ಮಹಾತ್ಮರು..! ಭಾಗ್ಯವಂತರು..! ಎಂದು ಶಿವನ ಕುರಿತಾಗಿ ಅಭಿವ್ಯಕ್ತಿಸುವುದು ಹೀಗೆ.[೫]

ಮಾನಸದಲ್ಲಿ ಮೀಯುವುದರಿಂದ ಸರ್ವಪಾಪಗಳು ನಾಶವಾಗಿ ಮುಕ್ತಿ ದೊರೆಯುತ್ತದೆ. ಎನ್ನುವ ಮಾತನ್ನು ಮಾತ್ರ ಎಲ್ಲ ಧರ್ಮ ಗ್ರಂಥಗಳು ಒಪ್ಪುತ್ತವೆ. ನಮ್ಮ ದೇವತೆಗಳು ವಿಹರಿಸುವ ಮೀಯುವ ತಾಣ ಮಾನಸ ಇಂದಿಗೂ ಬ್ರಾಹ್ಮಿ ಮುಹೂರ್ತದಲ್ಲಿ ಅಂದರೆ ಬೆಳಗ್ಗಿನ ಮೂರು ಗಂಟೆಯ ಸುಮಾರಿಗೆ ದೇವತೆಗಳು ಸರೋವರದೊಳಗಿಳಿದು ಮೀಯುವುದನ್ನು ಹಾಗೂ ಪುನಃ ಮೇಲಕ್ಕೆ ಹೋಗುವುದನ್ನು ನೋಡಿದವರಿದ್ದಾರೆ, ಎನ್ನುವ ಮಾತನ್ನು ಭಾರತೀಯ ಎಲ್ಲ ಯಾತ್ರಿಗಳು ಹಿರಿಯರ ಅನುಭವಗಳಿಂದ ಕೇಳಿ ತಿಳಿದಿದ್ದಾರೆ. ಆದುದರಿಂದ ಆ ಅನುಭವವನ್ನು ತಮ್ಮದಾಗಿಸುವ ಆಕಾಂಕ್ಷೆ ಸರ್ವ ಯಾತ್ರಿಗಳದ್ದು, ಜಗತ್ತಿನ ಕೇಂದ್ರ ಸ್ಥಾನವೆನಿಸಿಕೊಂಡಿರುವ ಈ ಸ್ಥಳದಲ್ಲಿ ಮನುಷ್ಯನ ಕಲ್ಪನಾಶಕ್ತಿಗೆ ಮೀರಿದ ವಿಲಕ್ಷಣ ದೃಶ್ಯಗಳು ಕಂಡುಬರುತ್ತವೆ.

## ೪.೩. ಧನ್ಯತೆಯ ಪ್ರಸಂಗಗಳು:

ಧನ್ಯತೆಯ ಭಾವನೆ ಉತ್ಪತ್ತಿಯಾಗುವುದು ಬಹಳ ದಿನಗಳ ನಂತರ ಮಹತ್ವಪೂರ್ಣವಾದುದನ್ನು ಪಡೆದುಕೊಂಡಾಗ ಉಂಟಾಗುವ ಭಾವವೇ ಧನ್ಯತೆ. ಕೈಲಾಸ

೫. ವೆಂಕಟೇಶ ಮಾಚಕನೂರ. 'ಕೈಲಾಸ ಮಾನಸ' ಪು.ಸಂ: ೭೪-೭೫

ಮಾನಸಕ್ಕೆ ಹೋದ ವಿವಿಧ ಲೇಖಕರು ತಮ್ಮ ಲೇಖನದ ಮುಖಾಂತರ ಧನ್ಯತಾ ಭಾವಗಳನ್ನು ಈ ರೀತಿಯಾಗಿ ಬಿಚ್ಚಿಡುತ್ತಾರೆ.

ಹಿಮಾಲಯ ಶ್ರೇಣಿಯ ದೃಶ್ಯ ವೈವಿದ್ಯ ಎಷ್ಟೆಂದರೆ ಅಲ್ಲಿ ಮೋಡಗಳು ಮಂಜಿನ ರಾಶಿ, ಹಿಮಶಿಖರ, ಹಾದಿಯುದ್ದಕ್ಕೂ ನಾನಾ ಆಕಾರಗಳಲ್ಲಿ ನಾನಾ ರೂಪಗಳಲ್ಲಿ ನಮಗೆ ನೋಡಲು ಸಿಗುತ್ತವೆ. ಅದನ್ನೆಲ್ಲಾ ಗಮನಿಸುವ ಕಣ್ಣು ಏಕಾಗ್ರತೆ ನೋಡುಗನಿಗಿರಬೇಕು. ಪ್ರವಾಸಿಯ ಮನಸ್ಸು ಹಸಿದಿರಬೇಕು. ಮೋಡವೆಂಬುದು ಅಲ್ಲಿ ಮಕ್ಕಳಾಟಿಕೆಯಿದ್ದಂತೆ ಯಾವಾಗ ಪ್ರವಾಸಿಗರ ಮೇಲಿರುತ್ತದೆ, ಯಾವಾಗ ಕೆಳಗಿರುತ್ತದೆ, ಯಾವ ಸಂದರ್ಭದಲ್ಲಿ ಪರ್ವತಾರೋಹಿಗಳು ಅದನ್ನು ಕೈಹಿಡಿದು ಸವರಬಹುದು, ಯಾವಾಗ ಅದರ ಮೂಲಕ ಹಾದು ಹೋಗುತ್ತೇವೆ ಎನ್ನುವುದು ಕ್ಷಣಕ್ಷಣಕ್ಕೂ ಬದಲಾಗುವ ಸಂಗತಿ. ಇವರೆದುರಿಗಿನ ಮೋಡ ಯಾವಾಗ ಕರಗುತ್ತೆ, ಎಷ್ಟು ಕರಗಿ ಇನ್ನು ಯಾವ ಮೋಡದ ರಾಶಿಗೆ ಸೇರುತ್ತೆ ಎಂಬುದನ್ನು ತದೇಕಚಿತ್ತರಾಗಿ ಒಂದೇ ಒಂದು ಮೋಡದ ರಾಶಿಯನ್ನು ಗಮನಿಸಿ ಹೇಳುವುದು ಕಷ್ಟ. ಇನ್ನು ಪರ್ವತ ಶ್ರೇಣಿಗಳನ್ನು ಆವರಿಸಿರುವ ಮಂಜಂತೂ ನಾನಾ ರೀತಿಯಲ್ಲಿ, ವಿವಿಧ ಆಕಾರದಲ್ಲಿ ಕಾಣುತ್ತಿರುತ್ತದೆ. ಕೆಲವೊಮ್ಮೆ ಗಣೇಶನ ಸೊಂಡಿಲಾಗಿ, ಇನ್ನು ಕೆಲವೊಮ್ಮೆ ತ್ರಿಶೂಲದ ರೂಪದಲ್ಲಿ ಮತ್ತು ಕೆಲವೊಮ್ಮೆ ಮಾರುತಿಯ ಭಂಗಿಯಲ್ಲಿ ಮಂಜಿನಿಂದ ಆವೃತವಾದ ಶಿಖರಗಳು ಮಾತ್ರವಲ್ಲ, ಹತ್ತಾರು ಯುಗ, ಹತ್ತಾರು ಸಂವತ್ಸರಗಳನ್ನು ಕಳೆದಿರುವ ಬಂಡೆಗಲ್ಲುಗಳು ಕೂಡಾ ನಾನಾ ರೀತಿಯ ರೂಪಗಳಲ್ಲಿ ಪ್ರವಾಸಿಗರಿಗೆ ಕಾಣುತ್ತವೆ. ಹೀಗೆ ಪರಿಸರದ ಅಂಶಗಳು ವಿವಿಧ ರೀತಿಯ ಧನ್ಯತೆಯನ್ನು ಒದಗಿಸುತ್ತದೆ.[೬] ಕೈಲಾಸ ಮಾನಸಕ್ಕೆ ಪ್ರವಾಸ ಹೋಗಿ ಅಲ್ಲೇ ಸಾಯಬೇಕು ಅದರಲ್ಲೇ ಧನ್ಯತೆಯನ್ನು ಕಾಣಬೇಕು, ಎಂದುಕೊಳ್ಳುವ ಜನ ಕೂಡಾ ಸಾಕಷ್ಟಿರುತ್ತಾರೆ. ಅದೇ ರೀತಿ ಕೆಲವು ವರ್ಷಗಳಿಂದ ಪದೇ ಪದೇ ಮಾನಸ ಯಾತ್ರೆಗೆ ಬರುತ್ತಿದ್ದ ಕನ್ನಡಿಗರೊಬ್ಬರಿಗೆ ಮಾನಸ ಸರೋವರ ಯಾತ್ರೆಯ ಸಂದರ್ಭದಲ್ಲೇ ಹಿಮಾಲಯದಲ್ಲಿ ಸಾಯುವ ಇಚ್ಚೆಯಿತ್ತಂತೆ, ನಾಲ್ಕು ವರ್ಷ ಸತತವಾಗಿ ಯಾತ್ರೆಗೆ ಬಂದ ಆ ಇಳಿ ವಯಸ್ಸಿನ ಭಕ್ತರು ನಾಲ್ಕನೇ ಸಲ ಯಾತ್ರೆ ಮುಗಿಸಿ ಭಾರತದ ಗಡಿಯನ್ನು ಪ್ರವೇಶಿಸಿದ ಮೇಲೆ ಹೃದಯಾಘಾತವಾಗಿ ಸತ್ತರಂತೆ. ಆ ಮೇಲೆ ದೇಹವನ್ನು ಇಲ್ಲೇ ಸುಡಬೇಕು ಎಂಬುದು ಅವರ ಆಸೆಯಾಗಿತ್ತು. ಉಳಿದ ಯಾತ್ರಿಗಳಿಗೆ ಅವರ ಆ ಆಸೆಯನ್ನು ಪೂರೈಸುವುದು ಕಷ್ಟವಾಗಿರಲಿಲ್ಲ. ಇಂಥಹದರಲ್ಲೂ ಧನ್ಯತೆಯನ್ನು ಕಂಡುಕೊಳ್ಳುವ ಭಾವುಕ ಭಕ್ತರಿರುತ್ತಾರೆ ಎಂಬುದು ಕೆ. ಸತ್ಯನಾರಾಯಣರು ಪ್ರಸ್ತುತಪಡಿಸಿದ್ದಾರೆ.

---

೬.ಕೆ.ಸತ್ಯನಾರಾಯಣ. 'ಸದ್ದು! ದೇವರು ಸ್ನಾನ ಮಾಡುತ್ತಿದ್ದಾರೆ' ಪು.ಸಂ:೧೬-೧೭

ಜೈನಧರ್ಮದ ಅನುಯಾಯಿಗಳಿಗೂ ಕೈಲಾಸಪರ್ವತ ಅಷ್ಟೇ ಪವಿತ್ರವಾಗಿದೆ. ಅವರು ಈ ಪರ್ವತವನ್ನು ಅಷ್ಟಪಾದ ಎಂದು ಕರೆಯುತ್ತಾರೆ. ಜೈನರ ಪ್ರಥಮ ತೀರ್ಥಂಕರ ವೃಷಭನಾಥ ಕೈಲಾಸ ಪರ್ವತದಡಿ ನಿರ್ವಾಣ ಹೊಂದಿದರೆಂದು ಪ್ರತೀತಿ ಇದೆ. ಈಗ ಕೈಲಾಸ ಯಾತ್ರಿಕರು ಕೈಲಾಸ ಪರ್ವತದ ದರ್ಶನ ಮಾಡುವ ಸ್ಥಳವನ್ನು ಅಷ್ಟಪಾದವೆಂದೇ ಗುರುತಿಸುತ್ತಾರೆ. ಶಿಖ್ ಧರ್ಮಗುರು ಗುರುನಾನಕರು ಕೂಡಾ ಕೈಲಾಸ ಪರ್ವತಕ್ಕೆ ಭೇಟಿ ನೀಡಿದ್ದರಂತೆ.

ಹಿಮಾಲಯದಿಂದ ಅಂದರೆ ಕೈಲಾಸ ಮಾನಸ ಸರೋವರದ ಮಾರ್ಗವಾಗಿ ಚಲಿಸುವಾಗ ಬುಧಿ ಕ್ಯಾಂಪ್ ಸಮೀಪಿಸುತ್ತಿದ್ದಂತೆ ರಾಜಗಾಂಭೀರ್ಯದ ನೋಟವನ್ನು ಬೀರುತ್ತಿರುವ ಹಿಮಚ್ಛಾದಿತ ಪರ್ವತಶಿಖರಗಳ ತುದಿ ಕಾಣಿಸಲು ಆರಂಭವಾಗುವುದು ಇಲ್ಲಿಂದಲೆ. ಅವುಗಳ ಪ್ರಥಮ ದರ್ಶನ ಯಾತ್ರಿಕರಿಗೆ ಈ ಸ್ಥಳದಲ್ಲಿಯೇ ಆಗುತ್ತದೆ. ಮುಂದೆ ಮುಂದೆ ಹೋದಂತೆ ಭಗವಂತನ ಸೃಷ್ಟಿಯ ಅಗಾಧ ಕರುಣೆಯು ತಮ್ಮ ಹಾದಿಯುದ್ದಕ್ಕೂ ದೊರಕುತ್ತಿರುವುದನ್ನು ಮನಗಾಣುತ್ತಾ ಯಾತ್ರಿಕರು ಮುಂದುವರೆಯುತ್ತಿರುವ ಸಂದರ್ಭದಲ್ಲಿ ಮಾತು ಮೌನವಾಗಿ ಪರಿಣಮಿಸುತ್ತದೆ ಎನ್ನುತ್ತಾರೆ.

ಗುಂಜಿ ಕ್ಯಾಂಪ್ ಇದು ಪ್ರವಾಸಿಗರಿಗೆ ಆಶ್ರಯ ತಾಣವಷ್ಟೆ ಅಲ್ಲ ಧನ್ಯತೆಯ ಅನುಭಾವಗಳನ್ನು ಒದಗಿಸುವ ಪರಿಸರವಾಗಿದೆ. ಶಿವನ ಆಕಾರದ ಒಂದು ಬೆಟ್ಟ ಇಲ್ಲಿ ಮೈದಳೆದಿದೆ. ಪ್ರಕೃತಿದತ್ತವಾಗಿ ನಿರ್ಮಾಣಗೊಂಡಿರುವ ಭಗವಂತನ ದೇಹಾಕಾರವನ್ನು ಹೋಲುವ ಬಂಡೆ ಇದು. ಈ ಪವಿತ್ರ ದೃಶ್ಯದಿಂದ ಪುನೀತರಾಗುವ ಯಾತ್ರಿಗಳಿಗೆ 'ಕುಮಾವು ಮಂಡಲ ವಿಕಾಸ ನಿಗಮ'ವು ಮಾಡಿರುವ ವ್ಯವಸ್ಥೆಗಳ ಬಗ್ಗೆ ಪರಿಚಯ ದೊರಕುತ್ತದೆ. ಸಂಜೆ ಭಜನೆ, ಆರತಿ ನಡೆಯುತ್ತವೆ. ಸೇನೆಯ ಯೋಧರೂ ಇದರಲ್ಲಿ ಭಾಗವಹಿಸುತ್ತಾರೆ. ಸ್ವಾಮಿಗಳೊಬ್ಬರು ಪಾರಾಯಣ ಮಾಡಿದ 'ಆದಿತ್ಯಹೃದಯ' ಸ್ತೋತ್ರವನ್ನು ಕೇಳುತ್ತಾ ಯಾತ್ರಿಗಳು ಅನ್ನಪೂರ್ಣ ಶಿಖರದಲ್ಲಿ ಸೂರ್ಯೋದಯವನ್ನು ವೀಕ್ಷಿಸುತ್ತಾರೆ. 'ಹರಹರ ಮಹಾದೇವ' 'ಓಂ ನಮಃ ಶಿವಾಯ' ಘೋಷದೊಂದಿಗೆ ಅಲ್ಲಿಂದ ಮುಂದಿನ ನೆಲೆಯಾದ ಕಾಲಾಪಾನಿಗೆ ಹೊರಡುತ್ತಾರೆ.

ಓಂ ಪರ್ವತದ ಪಾವಿತ್ರ್ಯತೆ ದರ್ಶನದ ಅನನ್ಯತೆಯನ್ನು ಹೀಗೆ ಹೇಳುತ್ತಾರೆ. ಓಂ ಎಂಬ ಮೂಲ ಪದವು ಎಲ್ಲ ಶಬ್ದಗಳಲ್ಲಿ ಅಡಕಗೊಂಡ ರೂಪವಾಗಿದೆ. ಇದನ್ನು 'ಶಬ್ದಬ್ರಹ್ಮ'ವೆಂದೂ ಕರೆಯುತ್ತಾರೆ. ನಮ್ಮ ತತ್ವಶಾಸ್ತ್ರದಲ್ಲಿ ಪರಮ ಪವಿತ್ರವಾದ ಸಂಗತಿಯೊಡನೆ ಇದನ್ನು ಸಮೀಕರಿಸುತ್ತಾರೆ. ಹೀಗಾಗಿ ಓಂಕಾರವು ಅತ್ಯಂತ ಪಾವನವಾದ ಶಬ್ದ 'ಓಂ' ಇದನ್ನು 'ಪ್ರಣವ' ಎಂದೂ ಕರೆಯುತ್ತಾರೆ. ಇದು 'ಅ' 'ಊ' 'ಮ'ಗಳು ಸೃಷ್ಟಿ,

ಸ್ಥಿತಿ ಮತ್ತು ಲಯಕ್ಕೆ ಕಾರಣವಾದ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರನ್ನೂ ಪ್ರತಿನಿಧಿಸುತ್ತದೆ. ಓಂ ಕಾರವು ಶುಭಪ್ರದವಾದದ್ದು. ನಮ್ಮೆಲ್ಲ ಕಾರ್ಯಗಳಲ್ಲೂ ಯಶಸ್ಸನ್ನು ತರುವಂಥದ್ದು, ಹೀಗಾಗಿ ನಮ್ಮ ಎಲ್ಲ ಕಾರ್ಯಗಳನ್ನು ಮಂತ್ರಗಳನ್ನು ಓಂ ಕಾರದಿಂದಲೇ ಆರಂಭಿಸುತ್ತೇವೆ, ಓಂ ಪರ್ವತದಲ್ಲಿ ಕಾಣಬರುವ ಭಗವಂತನ ವೈಚಿತ್ರ್ಯವನ್ನು ಕಂಡು ಯಾತ್ರಕರೆಲ್ಲರೂ ಮೂಕವಿಸ್ಮಿತರಾಗುತ್ತಾರೆ. ಸಾಕ್ಷಾತ್ ಪರಶಿವನೇ ತನ್ನ ತ್ರಿಶೂಲದಿಂದ ಈ 'ಓಂ ಕಾರ' ವನ್ನು ಬರೆದಿದ್ದಾನೆಯೇ ಎಂದೆನಿಸುತ್ತದೆ. ಇದು ಅತೀ ವಿಸ್ಮಯಕಾರಕ ನೋಟವೇ ಸರಿ !

ಭಕ್ತಿ ಸಿದ್ದಾಂತದ ಪ್ರಕಾರ ಸಾಧನೆಗೆ ತೀರ್ಥ ಯಾತ್ರೆ ಅಥವಾ ತೀರ್ಥದರ್ಶನವು ಬಹುಮುಖ್ಯವಾದುದು, ತೀರ್ಥ ಯಾತ್ರೆಯು ಪರಿಪೂರ್ಣವಾಗಲು ತೀರ್ಥಕ್ಷೇತ್ರಗಳ ಅಥವಾ ಯಾತ್ರಾ ಸ್ಥಳಗಳ ಪ್ರದಕ್ಷಿಣೆಯು ಅಗತ್ಯವಾದ ಒಂದು ಅಂಗ. ಶ್ರೀರಾಮಕೃಷ್ಣಪರಮಹಂಸರ ಪ್ರಕಾರ ತೀರ್ಥಕ್ಷೇತ್ರಗಳು ಭಗವಂತನು ಸುಸ್ಪಷ್ಟವಾಗಿ ಶಕ್ತಿಯುತವಾಗಿ ಪ್ರಕಟಗೊಳ್ಳುವ ಸ್ಥಳಗಳು, ಏಕೆಂದರೆ ಅಲ್ಲಿ ಅನಾದಿಕಾಲದಿಂದಲೂ ಭಕ್ತರು ಜಪ, ಧ್ಯಾನ, ತಪಸ್ಸಾಧನೆಗಳ ಮೂಲಕ ಮನಃಪೂರ್ವಕವಾಗಿ ಭಗವಂತನನ್ನು ಕುರಿತು ಚಿಂತಿಸಿರುತ್ತಾರೆ.

ನಾವು ಹಿಮಾಲಯವನ್ನು ತೀರ್ಥಗಳಿಂದ ತುಂಬಿದ ಸ್ಥಳವೆಂದು ಭಾವಿಸುವುದರಿಂದ, ಅದನ್ನು 'ತೀರ್ಥಭೂಮಿ' ಎಂದು ಕರೆಯುತ್ತೇವೆ. ಈ ಪ್ರದೇಶಗಳು ನಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗಗಳಂತೆ ಪ್ರಶಸ್ತವಾದ ಸ್ಥಳವಾಗಿವೆ. ಹಿಮಾಲಯದಲ್ಲಿ ಹರಡಿರುವ ಪವಿತ್ರ ಸ್ಥಳಗಳಲ್ಲಿ ಕೈಲಾಸವು ಅತಿ ಉನ್ನತವಾಗಿದ್ದು ಅತ್ಯಂತ ಶ್ರೇಷ್ಠವಾದುದೆಂದು ಪರಿಗಣಿತವಾಗಿದೆ. ಈ ಪವಿತ್ರ ಸ್ಥಳಕ್ಕೆ ಭೇಟಿ ನೀಡಬೇಕೆಂಬುದು ಭಾರತದ ಪ್ರತಿಯೊಬ್ಬ ಧಾರ್ಮಿಕ ವ್ಯಕ್ತಿಯ ಮನದಾಳದ ಬಯಕೆಯಾಗಿರುತ್ತದೆ. ಕೈಲಾಸ ಪರ್ವತವು ಶಿವನ ಆವಾಸಸ್ಥಾನ. ನಮ್ಮ ಪುರಾಣಗಳು ಬ್ರಹ್ಮಲೋಕ, ವಿಷ್ಣುಲೋಕ, ಮತ್ತು ಶಿವಲೋಕಗಳೆಂಬ ಮೂರು ಲೋಕಗಳನ್ನು ಕುರಿತು ಹೇಳುತ್ತವೆ. ಮೊದಲಿನ ಎರಡು ಸೂಕ್ಷ್ಮ ಲೋಕಗಳು, ಮರ್ತ್ಯರಿಂದ ಹೊಂದಲು ಅಸಾಧ್ಯವಾದುವು. ಆದರೆ ಮೂರನೇಯದಾದ ಶಿವಲೋಕ ಪ್ರತೀಕವೆನಿಸಿದ ಕೈಲಾಸ ಪರ್ವತದ ಮೂಲಕ ಸಶರೀರವಾಗಿ ಭಕ್ತರು ಸ್ವರ್ಗಾರೋಹಣ ಮಾಡಲು ಸಾಧ್ಯ ಎಂಬ ನಂಬಿಕೆ ಇದೆ.

ಸಶರೀರನಾಗಿಯೇ ಧರ್ಮರಾಯನು ಸ್ವರ್ಗಲೋಕ ಪ್ರವೇಶಿಸಿದ ಎಂದು ಮಹಾಭಾರತವು ತಿಳಿಸುತ್ತದೆ. ಅವನು ತನ್ನ ಪಯಣವನ್ನು ಬದರಿನಾಥದಲ್ಲಿರುವ 'ಸ್ವರ್ಗಾರೋಹಣ' ಇದು ಅಲ್ಲೇ ಒಂದು ಪರ್ವತ ಶ್ರೇಣಿ ಮಾತ್ರವೇ ದೂರವಿರುವ, ಕೈಲಾಸ ಪರ್ವತಕ್ಕೆ ಸಾಗುವ ಟಿಬೇಟಿಯನ್ ಕಣಿವೆಯ ಬಳಿ ಇದೆ. ಹೀಗಾಗಿ

ಮಹಾಭಾರತವು ಹೇಳುವ ಸ್ವರ್ಗಲೋಕವು ಕೈಲಾಸಪರ್ವತವೇ ಎಂದು ನಾವು ಧಾರಾಳವಾಗಿ ನಿರ್ಣಯಿಸಬಹುದು.

ತಕಲ್‌ಕೋಟ್ ಪಕ್ಕದಲ್ಲಿ ಖೋಜಾರನಾಥ ಎಂಬ ಗ್ರಾಮವಿದೆ. ಅಲ್ಲಿ ಬಹು ಪುರಾತನವಾದ ರಾಮ-ಲಕ್ಷ್ಮಣ-ಸೀತೆಯ ದೇವಸ್ಥಾನವಿದೆ. ಆ ದೇವಸ್ಥಾನವನ್ನು ಪ್ರವೇಶಿಸಿದ ತಕ್ಷಣ ಯಾವುದೋ ಪುರಾತನ ಕಾಲವನ್ನು ಹೊಕ್ಕ ಹಾಗಾಗುತ್ತದೆ. ಕಂಚು ಹಿತ್ತಾಳೆ ತಾಮ್ರ ಬೆಳ್ಳಿಯಿಂದ ಮಾಡಿದ ವಿಗ್ರಹಗಳು ಪೂಜಾಸಾಮಗ್ರಿಗಳು, ಪೂಜಾ ಗೃಹದ ಕಗ್ಗತ್ತಲೆ ಅದನ್ನು ಭೇದಿಸುವ ಮೇಣದ ಬತ್ತಿಗಳ ಬೆಳಕು, ಎತ್ತರದಗೋಡೆ, ಪೂಜೆಗೆ ನೆರವಾಗುವವರ ವೇಷಭೂಷಣ, ಅವರ ಸುಕ್ಕು ತುಂಬಿದ ಮುಖ ಎಲ್ಲವೂ ಪ್ರವಾಸಿಗರನ್ನು ಇನ್ನೊಂದು ಕಾಲಕ್ಕೆ ಕರೆದೊಯ್ಯುತ್ತವೆ. ಈ ದೇವಸ್ಥಾನದಲ್ಲಿ ಬುದ್ಧನ ವಿಗ್ರಹವೂ ಇದೆ. ರಾಮದೇವರ ಜೊತೆ ಬುದ್ಧ ದೇವನಿಗೂ ಪೂಜೆ ನಡೆಯುತ್ತದೆ. ಸಂಸ್ಕೃತಿಯ ಉತ್ಕ್ರಾಂತಿಯ ಸಂದರ್ಭದಲ್ಲಿ ದೇವಸ್ಥಾನದ ಕೆಲವು ಭಾಗಗಳನ್ನು ಹಾಳುಮಾಡಲಾಯಿತು ಎನ್ನುತ್ತಾರೆ. ಬಾಗಿಲು, ತೇರು, ತೋರಣವನ್ನು ಹಿತ್ತಾಳೆ ಬೆಳ್ಳಿಯಿಂದ ತಯಾರು ಮಾಡುತ್ತಿದ್ದ ಕುಲುಮೆಗೆ ಹೋದ ಕೆ.ಸತ್ಯನಾರಾಯಣರು ಖೋಜಾರ್‌ನಾಥ ದೇವಸ್ಥಾನದ ಕುರಿತಾಗಿ ಧನ್ಯತೆಗಳನ್ನು ಅಭಿವ್ಯಕ್ತಿಸುತ್ತಾರೆ.[೭]

ಪವಿತ್ರ ಜ್ಯೋತಿರ್ಲಿಂಗದ ಪುಣ್ಯ ದರ್ಶನ ಸ್ಪರ್ಶನ ಪೂಜೆ ಅಭಿಷೇಕ ಮಾಡುವುದರಿಂದ ಅನಂತ ಪುಣ್ಯ ಪ್ರಾಪ್ತಿಯಾಗುತ್ತದೆ. ಪೂರ್ವದಲ್ಲಿ ಅಲಕನಂದೆ ಪಶ್ಚಿಮದಲ್ಲಿ ಮಂದಾಕಿನಿ ನದಿಗಳಲ್ಲಿ ಸ್ನಾನ ಮಾಡುವುದರಿಂದ ಸಕಲ ಪಾಪಗಳಿಂದ ಮುಕ್ತರಾಗಿ ಲೌಕಿಕ ಪಾರಮಾರ್ಥಿಕ ಫಲಗಳು ಪ್ರಾಪ್ತವಾಗುವುದಲ್ಲದೇ ಅಚಲ ಶಿವಭಕ್ತಿ ಮತ್ತು ಮೋಕ್ಷವೂ ಪ್ರಾಪ್ತವಾಗುತ್ತದೆ. ಇದು ಸತ್ಯ ಎಂದರೆ ಅತಿಶಯೋಕ್ತಿ ಆಗದು.

ಸ್ವಾಮಿ ಶ್ರೀ ಗೀತಾನಂದರ ಅಭಿಪ್ರಾಯದಂತೆ ಈ ಪ್ರದೇಶ ಮುನಿಗಳ ತಪೋಭೂಮಿ. ಯಜ್ಞಯಾಗಾದಿ ಸ್ಥಳದ ಮೂಲಕ ಘನತೆ ಗೌರವಕ್ಕೆ ಕಾರಣಿಭೂತವಾಗಿದೆ. ರಾಜರ್ಷಿಗಳು, ಬ್ರಾಹ್ಮಣರು ಕುರುಕ್ಷೇತ್ರವನ್ನು ಅಗ್ನಿ, ಇಂದ್ರಸೋಮ, ವಿಷ್ಣು, ವಿಶ್ವದೇವರ ಕರ್ಮಭೂಮಿಯಾಗಿದೆ. ಇಲ್ಲಿ ಯಜ್ಞಯಾಗಾದಿಗಳನ್ನು ಪೂರೈಸಿದರೆ ಸ್ವರ್ಗ ಪ್ರಾಪ್ತಿಯಾಗುವದೆಂದು ವೇದಗಳಲ್ಲಿ ಆಖ್ಯಾಯಿಕೆಯಿದೆ. ಮಹಾಭಾರತದ ಕಾಲದ ಪೂರ್ವದಲ್ಲಿ ಬ್ರಹ್ಮವೀದಿ, ಸಮಂತ, ಪಂಚಕ, ರಾಮಹದ ಎಂದು ಈ ಕ್ಷೇತ್ರ ಹೆಸರುಗಳನ್ನು ಹೊಂದಿತ್ತು, ಸಂತರ ಕುರುಮಹಾರಾಜನ ಆಳ್ವಿಕೆಯಲ್ಲಿ ಕುರುಕ್ಷೇತ್ರವಾಯಿತು ಎಂಬ

೭. ಕೆ.ಸತ್ಯನಾರಾಯಣ. 'ಸದ್ದು! ದೆವರು ಸ್ನಾನ ಮಾಡುತ್ತಿದ್ದಾರೆ' ಪು.ಸಂ:೪೦-೪೧

ಪ್ರತೀತಿ ಇದೆ.[೮]

ಮಾನಸ ಸರೋವರ ವಿಷ್ಣುವಿನ ವಾಸಸ್ಥಾನವೆಂದು ಪ್ರತೀತಿ. ಅತ್ತ ಬ್ರಹ್ಮ ಮಧ್ಯ ವಿಷ್ಣು ಮತ್ತೊಂದು ಕಡೆ ಮಹೇಶ್ವರ, ಬ್ರಹ್ಮ ವಿಷ್ಣು ಮಹೇಶ್ವರ ಒಂದೇ ಪರಿಸರದಲ್ಲಿ ಒಂದೆಡೆಯಲ್ಲಿ ಸೃಷ್ಟಿಕರ್ತರನ್ನು ನೋಡುತ್ತ ಪ್ರವಾಸಿಗರು ಭಾವಪರವಶರಾಗಿ ಎಷ್ಟೊ ಹೊತ್ತು ನಿಂತಿದ್ದು ಧನ್ಯತೆಯನ್ನು ಅನುಭವಿಸುತ್ತಿದ್ದರು. ಮಾನಸ ಸರೋವರ ಕೂಡಾ ವರ್ಷದ ಬಹುಕಾಲ ಹೆಪ್ಪುಗಟ್ಟಿರಿತ್ತದೆ. ಮೇ –ಜೂನ ತಿಂಗಳಲ್ಲಿ ಸೂರ್ಯನ ಉದಾರತೆಯಿಂದ ಹಿಮ ಕರಗತೊಡಗಿದೊಡನೆ ಇಲ್ಲಿನ ಸಮಸ್ತ ಪರಿಸರ ಚಲನಶೀಲವಾಗತೊಡಗುತ್ತದೆ. ಮಾನಸ ಸರೋವರ ಜಗತ್ತಿನ ಅತೀ ಎತ್ತರದ ನಿರ್ಮಲ ನೀರಿನ ಸರೋವರ ಹೀಗೆ ವಿವಿಧ ಲೇಖಕರು ತಮ್ಮ ಕೈಲಾಸ-ಮಾನಸ ಪ್ರವಾಸದಲ್ಲಿ ಕಂಡುಂಡ ಧನ್ಯತೆಯ ಅಂಶಗಳನ್ನು ಬಹುಸೊಗಸಾಗಿ ತಮ್ಮದೇ ಆದ ಶೈಲಿಯಲ್ಲಿ ಅಭಿವ್ಯಕ್ತಿಸಿದ್ದಾರೆ.

**೪.೪ ಪರಿಸರ ತಾದ್ಯಾತ್ಮತೆ**

ಕೈಲಾಸ ಮಾನಸ ತೀರ್ಥಯಾತ್ರೆ ಮಾಡುವುದು ಬರಿ ಪ್ರವಾಸವಲ್ಲ ಅದೊಂದು ಅನನ್ಯ ಅನುಭವ. ಮಾನವ ಪರಿಸರದ ಜೀವಿ ಪರಿಸರ ಪ್ರೇಮಿ ಹೀಗಾಗಿ ಹಿಮಾಲಯದ ಪರಿಸರವನ್ನು ಕಂಡು ತನ್ಮಯನಾಗುತ್ತಾನೆ. ಪರಿಸರದಲ್ಲೇ ಪರಮಾತ್ಮನನ್ನು ಕಾಣುವ ಮನೋಭಾವ ಪ್ರವಾಸಿಗರಲ್ಲಿರುತ್ತದೆ. ವಿವಿಧ ಲೇಖಕರು ವಿವಿಧ ತೆರನಾದ ಪರಿಸರ ತಾದ್ಯಾತ್ಮತೆಯನ್ನು ಅಭಿವ್ಯಕ್ತಿ ಪಡಿಸುವುದು ಹೀಗೆ.

ಸ್ವಾಮಿ ಅಖಂಡಾನಂದರ 'ಹಿಮಾಲಯದ ಮಡಿಲಲ್ಲಿ' ಎನ್ನುವ ಪುಸ್ತಕದಲ್ಲಿ ಪರಿಸರ ಎಷ್ಟರಮಟ್ಟಿಗೆ ತಾದ್ಯಾತ್ಮತೆ ಒದಗಿಸಿದೆ ಎಂಬುದನ್ನು ತಿಳಿಸುತ್ತಾರೆ. ದೇವಿ ಚಂದ್ರವದನೆಗೆ ದೇವಸ್ಥಾನವನ್ನು ಕಟ್ಟಬೇಕೆಂದೇ ಭಗವಂತನು ಈ ಬೆಟ್ಟದ ಶಿಖರವನ್ನು ನಿರ್ಮಾಣ ಮಾಡಿರುವನು ಎಂಬ ಕಲ್ಪನೆಯನ್ನು ಮಾಡಿಕೊಳ್ಳುತ್ತಾರೆ. ಅಕ್ಕಪಕ್ಕದ ಪರ್ವತ ಸಾಲುಗಳಿಗಿಂತ ಭಿನ್ನವಾಗಿ ನಿಂತು ಅದು ಕಂಗೊಳಿಸುತ್ತಿತ್ತು, ಈ ಮಹಾವೈಭವದ ಹಿಮಾಲಯವು ತನ್ನ ಒಂದು ಶಿಖರದ ಮೇಲೆ ಜಗನ್ಮಾತೆಯನ್ನು ಪ್ರತಿಷ್ಠಾಪಿಸಿ ಉಳಿದೆಲ್ಲ ಶಿಖರಗಳ ಮೂಲಕವೂ ಆಕೆಯ ಮುಂದೆ ತಲೆ ತಗ್ಗಿಸಿ ವಿಧೇಯತೆಯಿಂದ ನಿಂತಿರುವುದು ಎಂದು ಸ್ವಾಮಿ ಅಖಂಡಾನಂದರು ಯೋಚಿಸಿದರು. ದಿವ್ಯ ಪರಿಮಳದ ಹೂ-ಹಣ್ಣುಗಳಿಂದ ಹಿಮವಂತನೇ ದೇವಿಯನ್ನು ಪೂಜಿಸುತ್ತ ಆ ಮೂಲಕ ತನ್ನ ವೈಭವನ್ನು ಹೆಚ್ಚಿಸಿಕೊಂಡಿರುವನು, ಈ ಶಿಖರವೊಂದೇ ಪ್ರತ್ಯೇಕವಾಗಿ ಪರ್ವತಸಾಲುಗಳಿಗೆ ಲಂಬವಾಗಿ ನಿಂತಿರುವುದು ಈ ಶಿಖರಗಳು ಸ್ಥಳದ ಸಹಜ ಸೌಂದರ್ಯಕ್ಕೆ ಕಳಶವಿಟ್ಟಂತಾಗಿದೆ.

---

೮. ಗುರುಬಸವ ಸುತ. 'ಹಿಮಾಲಯ ಕ್ಷೇತ್ರ ದರ್ಶನ' ಪು.ಸಂ:೫೯

'ಅಗಸ್ತ್ಯ ಮುನಿ' ಒಂದು ಪವಿತ್ರ ಸ್ಥಳ! ಹಿಂದೆ ಇಲ್ಲಿ ಅಗಸ್ತ್ಯ ಋಷಿ ತಪಸ್ಸು ಮಾಡುತ್ತಿದ್ದನಂತೆ, ಅದರಿಂದಾಗಿ ಈ ಸ್ಥಳವು ಪವಿತ್ರವಾಯಿತು; ಸ್ಥಳವು ಅವನ ಹೆಸರಿನಿಂದಲೇ ಪ್ರಸಿದ್ಧವಾಯಿತು. ತಪಸ್ಸು ಮಾಡುವುದಕ್ಕೆ ತುಂಬ ಯೋಗ್ಯವಾದ ಜಾಗವಿದು.



'ಗುಪ್ತಕಾಶಿ' ಇರುವುದು ಹೆಚ್ಚುಕಡಿಮೆ ಒಂದು ಪರ್ವತಾಗ್ರದಲ್ಲಿ, ಇಲ್ಲಿಂದ ಕಾಣುವ ವಿಹಂಗಮ ಪಕ್ಷಿನೋಟ ಅತ್ಯಂತ ಮನೋಹರವಾಗಿರುತ್ತದೆ ಅಂತೆ. ಕೆಳಗಡೆ ಕಣಿವೆಯಲ್ಲಿ ಮಂದಾಕಿನಿಯ ಸುತ್ತಿಬಳಸಿ ಹರಿಯುತ್ತಿರುವ ಸುಂದರ ದೃಶ್ಯವು ಮೈಮನ ಸೆಳೆಯುವುದನ್ನು ನೋಡಬಹುದು. ಎದುರಿಗೆ ಕಾಣುವ ಇನ್ನೊಂದು ಬೆಟ್ಟದ ಮೇಲೆ 'ಊಖೀಮಠ'ವೆಂಬ ಆಕರ್ಷಕವಾದ ಇನ್ನೊಂದು ಸಣ್ಣ ಊರಿದೆ. 'ಗುಪ್ತಕಾಶಿ' ಮತ್ತು 'ಊಖೀಮಠ' ಇವೆರಡೂ ಎದುರು ಬದುರಾಗಿದ್ದು ಹೆಚ್ಚುಕಡಿಮೆ ಒಂದೇ ಎತ್ತರದಲ್ಲಿವೆ ಗುಪ್ತಕಾಶಿಯಲ್ಲಿ ಸುಂದರವಾದ ಕಲ್ಲಿನಿಂದ ಕಟ್ಟಿರುವ ಎರಡು ದೇಗುಲಗಳಿದ್ದು, ಒಂದರಲ್ಲಿ ಕಲ್ಲಿನ ವಿಗ್ರಹವೂ ಇನ್ನೊಂದರಲ್ಲಿ ಲೋಹದ ವಿಗ್ರಹಗಳೂ ಇವೆ. ಇವು ಯಾವ ದೇವರುಗಳಿಗಾಗಿ ಇರುವ ದೇವಾಲಯಗಳು ಎನ್ನುವುದು ಸ್ವಾಮಿ ಅಖಂಡಾನಂದರಿಗೆ ನೆನಪಿಲ್ಲ, ಹಿತ್ತಾಳೆಯಿಂದ ಮಾಡಲ್ಪಟ್ಟ ಎರಡು ಗೋಮುಖಗಳಿದ್ದು ಪರ್ವತದ ಕಡೆಯಿಂದ ಬರುವ ಜಲಧಾರೆ ಇವುಗಳ ಬಾಯಿಂದ ಒಂದೇ ಸವನೆ ಸುರಿಯಿತ್ತಿರುತ್ತದೆ. ಸುರಿದ ನೀರು ಕೆಳಗೆ ಇರುವ ಮಂದಾಕಿನಿಯನ್ನು ಸೇರುತ್ತದೆ. ಈ ಗೋಮುಖ ಜಲಧಾರೆಯ ಕಲ್ಪನೆ ತುಂಬ ಅನನ್ಯವಾದದ್ದು.

ಕೇದಾರನಾಥಕ್ಕೆ ಹೋಗುವ ದಾರಿಯಲ್ಲಿ ಸಿಕ್ಕುವ ಪವಿತ್ರ ದೇವಾಲಯಗಳಲ್ಲಿ ಒಂದಾದ ತ್ರಿಯುಗೀ ನಾರಾಯಣ, ಇದು ಗುಪ್ತಕಾಶಿಯಿಂದ ಎರಡು ದಿನಗಳ ಹಾದಿ. ಗುಪ್ತಕಾಶಿಯಿಂದ ಹೊರಟ ನಾವು ಮೇಲಕ್ಕೆ ಹತ್ತುತ್ತ ಕೆಳಕ್ಕೆ ನೋಡಿದಾಗ ಸುತ್ತಮುತ್ತಣ ಪ್ರದೇಶವೆಲ್ಲಾ ಹಚ್ಚಹಸಿರ ಛಾವಣಿಯಿಂದ ಮುಚ್ಚಿಕೊಂಡಿರುವುದು ಕಾಣಿಸುತ್ತಿತ್ತು. ಅಲ್ಲಲ್ಲಿ ಸಣ್ಣಪುಟ್ಟ ಅಬ್ಬಿಸೆರಗುಗಳು ಬೆಳ್ಳನೆಯ ಗೆರೆಗಳಂತೆ ಕಾಣಿಸುತ್ತಿದ್ದವು. ತ್ರಿಯುಗೀ ನಾರಾಯಣ ದೇವಾಲಯವು ಒಂದು ಉನ್ನತವಾದ, ತೆರೆದ ಆವರಣದ, ಹೆಚ್ಚು ಕಡಿಮೆ ಮಟ್ಟಸವಾದ ಜಾಗದಲ್ಲಿದೆ; ಸುತ್ತಮುತ್ತ ಮಂಜುಮುಸುಕಿದ ಹಿಮಾಲಯದ ಶಿಖರಗಳಿವೆ. ಈ ಹಿಮಾಲಯ ಪರ್ವತಶ್ರೇಣಿಯ ಮೇಲಿನ ಅರ್ಧಭಾಗ ಮಂಜಿನ ಧವಳಕಾಂತಿಯ ಮುಸುಕಿನಿಂದ ಹೊಳೆಯುತ್ತಿರುತ್ತದೆ. ಕೆಳಗಿನ ಅರ್ಧಭಾಗವು ಹಚ್ಚಹಸಿರು ದೇವದಾರು ವೃಕ್ಷಗಳಿಂದ ಮುಚ್ಚಲ್ಪಟ್ಟಿರುತ್ತದೆ. ಹಿಮಾಲಯ ದೃಶ್ಯದ ಈ ಎರಡು ಅಂಶಗಳು ಮೇಲ್ಭಾಗದ ಕಣ್ಣು ಕೋರೈಸುವ ಧವಳಕಾಂತಿಯು ಕೆಳಭಾಗದ ಹಚ್ಚಹಸಿರು ಛಾವಣಿಯಿಂದ ಅಷ್ಟೊಂದು

ಚೆನ್ನಾಗಿ ಬೇರ್ಪಟ್ಟಂತೆ ಕಾಣುತ್ತಿರುವುದು, ನನ್ನ ಮನಸ್ಸನ್ನು ಭವ್ಯ ಪರಿಭಾವನಾಲಹರಿಗೆ ತಳ್ಳಿದವು. ಹರಿ ಮತ್ತು ಹರ ಇಬ್ಬರೂ ಬೃಹದಾಕಾರದ ಈ ರೂಪದಲ್ಲಿ ನನ್ನೆದುರು ಪಸರಿಸಿಕೊಂಡಿರುವಂತೆ ತೋರುತ್ತದೆ. ಲೇಖಕರು ಪ್ರಾರ್ಥನೆ ಮಾಡುತ್ತ ಧ್ಯಾನದಲ್ಲಿ ನಿಲ್ಲುತ್ತಾರೆ. ನನಗೆ ಪ್ರಪಂಚದ ಈ ಅತಿಬೃಹತ್ ಪರ್ವತಕಾಯದಲ್ಲಿ ದೇವಾನುದೇವತೆಗಳೆಲ್ಲರೂ ಒಂದಾಗಿ ಸೇರಿಹೋಗಿರುವಂತೆ ಭಾಸವಾಯಿತು. ಅದಕ್ಕೆ ಮಹಾಕವಿ ಕಾಳಿದಾಸನು ಹಿಮಾಲಯವನ್ನು ಪ್ರಶಂಸಿಸುತ್ತ ಬರೆದಿರುವುದು 'ದೇವರೂಪಿ ಹಿಮಾಲಯ ಪರ್ವತರಾಜ ಈ ಭೂಮಿಯನ್ನಳೆಯುವ ಮಾನದಂಡ' ಮತ್ತಾರೂ ಹಿಮಾಲಯದ ಭವ್ಯತೆಯನ್ನು ಇದಕ್ಕಿಂತ ಚೆನ್ನಾಗಿ ವರ್ಣಿಸಿದ ಶ್ರೇಯಸ್ಸು ಸ್ವಾಮಿ ಅಖಂಡಾನಂದರಿಗೆ ಸಲ್ಲುವಂಥದ್ದು.

ಗೌರಿಕುಂಡದಿಂದ ಕೇದಾರನಾಥ ದೇವಸ್ಥಾನವು ಸುಮಾರು ಆರು ಕೋಶ (೧೦ ಕಿ.ಮೀ) ದೂರವಿದೆ. ಹಾದಿ ತೀರ ಕಡಿದಾಗಿ ಬಿಟ್ಟೂ ಬಿಡದೆ ಮೇಲೆರುತ್ತದೆ; ಆದರೆ ಅಂಕು ಡೊಂಕಾದ, ತಿರುವು ಮುರುವುಗಳಿಂದ ಕೂಡಿದ ಪರ್ವತದ ಹಾದಿ ಒಂದೊಂದು ಹೆಜ್ಜೆಯಿಟ್ಟು ಮುಂದುವರೆದಂತೆಲ್ಲಾ ನಾವು ಉನ್ನತಿಗೇರುತ್ತಿರುವ ಅನುಭವವಾಗುತ್ತದೆ. ಸ್ವಾಮಿ ಅಖಂಡಾನಂದರು ನಿಧಾನವಾಗಿ ದೇವಸ್ಥಾನದ ಬಳಿಸಾರುತ್ತಿದ್ದಂತೆ ವಾತಾವರಣದ ತಂಪು ಹೆಚ್ಚಾಗುತ್ತ ಹೋಗುತ್ತದೆ. ಹಿಂದೆಂದೂ ನೋಡಿರದ ಮುಂದೆಂದೂ ನೋಡುವ ಭರವಸೆ ಇಲ್ಲದ ಅಸಾಮಾನ್ಯ ದೃಶ್ಯವು ಲೇಖಕರ ಕಣ್ಣೆದುರು ಅನಾವರಣಗೊಳ್ಳುತ್ತ ಹೋಗುತ್ತದೆ, ಸುಂದರ ಪ್ರಕೃತಿಮಾತೆಯು ತನ್ನ ರೂಪವೈಭವವನ್ನು ಅನಾವರಣಗೊಳಿಸಿದಂತೆಲ್ಲ ಪ್ರಾಪಂಚಿಕವಾದ ದುಃಖ ದುಗುಡಗಳು ಮರೆತುಹೋಗುತ್ತವೆ.

ಆಹಾ! ಅದೆಂತಹ ಸೌಂದರ್ಯರಾಶಿ–ವರ್ಣನಾತೀತ! ಹಸಿರು ಹೊದ್ದಿರುವ ವೃಕ್ಷರಾಶಿಗಳು, ಅವುಗಳಿಂದ ಸ್ಫೋಟಿಸುತ್ತಿರುವವೋ ಎಂಬಂತೆ ಅರಳುತ್ತಿರುವ ಅಸಂಖ್ಯ ಪುಷ್ಪಗಳು, ಇಡಿ ವಾತಾವರಣವನ್ನು ಪರ್ಯಾಪ್ತಗೊಳಿಸಿದ್ದ ಅವುಗಳ ಸ್ವರ್ಗೀಯ ಪರಿಮಳ, ಮೃದು ಮಧುರವಾಗಿ ಕೇಳಿಬರುತ್ತಿದ್ದ ಜೇನಿನ ಝೇಂಕಾರ, ಎಲ್ಲೆಡೆಯಿಂದ ಮೃದುವಾಗಿ ಮೈಸೋಕುತ್ತಿದ್ದ ದಿವ್ಯಗಂಧಿತ ಸಮೀರಣನ ಸುಯ್ಲು ಅನಿರ್ವಚನೀಯ ಅನುಭವ! ದಶದಿಕ್ಕುಗಳಿಂದಲೂ ಕೇಳಿಬರುತ್ತಿದ್ದ ವಿವಿಧ ರೂಪದ ವಿವಿಧ ಜಾತಿಯಪಕ್ಷಿಗಳ ಗಂಧರ್ವಗಾನ, ಕೆಳಗೆ ಆಳದಲ್ಲಿ ಹರಿಯುತ್ತಿದ್ದ ಮಂದಾಕಿನೀ ನದಿಯ ಗೆರೆ ಎಳೆದಿಟ್ಟಿರುವಂತೆ ಕಾಣಿಸುತ್ತದೆ.

ಕೆಳಗಿನಾಳದಿಂದ ಕೇಳಿಬರುತ್ತಿದ್ದ ನದಿಯು ಹರಿಯುವ ಮರ್ಮರನಿನಾದ, ಸುತ್ತು ಮುತ್ತಲೂ ಮಂಜುಮುಸುಕಿದ ಧವಳ ಕಾಂತಿಯಿಂದ ಥಳಥಳನೆ ಮಿನುಗುತ್ತ ಹೊಳೆಯುವ

ಪರ್ವತಶಿಖರಗಳು, ಅವುಗಳ ದಿವ್ಯ ಪ್ರಕಾಶದ ವರ್ಣವೈವಿಧ್ಯ! ಲೇಖಕರಿಗೆ ಸಹಸ್ರ ನಾಲಿಗೆಗಳಿದ್ದಿದ್ದರೂ, ಸಹಸ್ರ ಕೈಗಳಿದ್ದರೂ ನಾನು ನೋಡಿದ್ದನ್ನೆಲ್ಲ ವಿವರಿಸಲು ಸಾಧ್ಯವಾಗುತ್ತಿರಲಿಲ್ಲ! ಭಗವಂತನ ಅಂತಹ ಸುಂದರ ಸೃಷ್ಟಿ ಅದು.[೯]

ಹಿಮಾಲಯದ ಬೆಟ್ಟಗಳು ಸದಾ ಹಸುರಿನಿಂದ ಕೂಡಿದ್ದು ತುಂಬಿ ಹರಿವ ನದಿಗಳು, ವಿಶಾಲ ಸರೋವರಗಳು, ಹಸಿರೇ ಇಲ್ಲಿಯ ಪ್ರಕೃತಿಯ ಉಸಿರಾಗಿದೆ. ಬಯಲಾಗಿರಲಿ, ಕೃಷಿಭೂಮಿಯಾಗಿರಲಿ, ಬೆಟ್ಟವಿರಲಿ ಸದಾ ಕಣ್ಣಿಗೆ ರಾಚುವ ಹಸಿರಿನ ಬಸಿರು ಹೊತ್ತು ಎದೆಯುಸಿರು ಬಿಡುತ್ತ ನಿಂತಂತೆ ಕಾಣುತ್ತದೆ. ರೈನ್ ನದಿಯ ಜಲಪಾತ ನೋಡಿ ಬೆಳಗಾವಿ ಜಿಲ್ಲೆಯ ಗೋಕಾಕ ಜಲಪಾತದ ರುದ್ರ ರಮ್ಯ ನೋಟವಿಲ್ಲಿ ಎತ್ತರವಂತೂ ತೀರ ಕಡಿಮೆ ಎನ್ನುತ್ತಾರೆ. ಹಿಮಾಲಯ ಪರ್ವತ ಪಂಕ್ತಿಯ ಸೌಂದರ್ಯ ಧರ್ಮಾಂವರಂ, ಕಾಂಚಿವರಂ, ಬನಾರಸ  ರೇಷ್ಮೆ ಸೀರೆ ಉಟ್ಟ ಗೌರವಾನ್ವಿತ ಹಿರಿಯ ಮಹಿಳೆಯ ಸೌಂದರ್ಯದಂತೆ ಕಂಡರೆ ಕರ್ನಾಟಕದ ಪಶ್ಚಿಮ ಘಟ್ಟಗಳ ಸೊಗಡು ಇಳಕಲ್ ರೇಷ್ಮೆ ಸೀರೆ ಉಟ್ಟ ಗ್ರಾಮೀಣ ಮಹಿಳೆಯೊಬ್ಬಳ ಸೌಂದರ್ಯದಂತೆ ಹಾಗೂ ಸ್ವಿಸ್ ಬೆಟ್ಟಗಳ ಬೆಡಗು ನಯವಾದ ರೇಷ್ಮೆ ಸೀರೆ ಉಟ್ಟ ಆಧುನಿಕ ಸ್ತ್ರೀಯ ಸೌಂದರ್ಯದಂತೆ ತೋರುತ್ತದೆ ಎಂದು ಹೋಲಿಕೆಗಳ ಮೂಲಕ ದೃಶ್ಯ ಕಾವ್ಯದಂತೆ ವಿವರಣೆ ನೀಡುತ್ತಾರೆ.

ದೂರದ ನೇಪಾಳದ ಬೆಟ್ಟಗಳನ್ನು ಮುಚ್ಚಿರುವ ಉದ್ದುದ್ದ ದೇವದಾರು ಹಾಗೂ ಸೂಚಿಪರ್ಣ ವೃಕ್ಷಗಳನ್ನು ಮತ್ತು ಎಡಬದಿಗಿರುವ ಚಿಯಾಲೇಕ ಪರ್ವತದ ಮೇಲಿರುವ ವೃಕ್ಷರಾಶಿಗಳನ್ನು ಗಮನಿಸುತ್ತಾ ನಡುವಿನ ಕಣಿವೆಯಲ್ಲಿ ಅವರು ನಡೆವ ಹಾದಿಯಲ್ಲಿ ಈ ಬೆಟ್ಟದ ಮಡಿಲಲ್ಲಿ ಅರಳಿ ತಂಗಾಳಿಗೆ ಮೈದೂಗಿ ಓಲಾಡುವ ಆ ಹೂಗಳ ಸೊಬಗನ್ನು ಕಣ್ಣಾರೆ ಸವಿಯುತ್ತ ಮೆಲ್ಲ ಮೆಲ್ಲ ಹೆಜ್ಜೆ ಹಾಕುತ್ತಿದ್ದರು. ಹಾಗೆಯೆ ಮುಂದುವರೆದು ಕಾಳಿನದಿಯು ಕೂಡಾ  ಚಿಯಾಲೇಕನ ಹೂಕಣಿವೆಯ ಸಮ್ಮೋಹನಕ್ಕೆ ಒಳಗಾದವಳಂತೆ ಬಳಕುತ್ತಾ ಜುಳು-ಜುಳು ನಿನಾದಗೈಯುತ್ತಾ ನಮ್ಮಿಂದ ಅಷ್ಟು ದೂರದಲ್ಲಿ ಹರಿಯುವದನ್ನು ನೋಡಿ ನಾವು ನಿನ್ನೆ ನೋಡಿದ ರುದ್ರ ಹಾಗೂ ವಾಚಾಳಿ ಕಾಳಿ ಇವಳೇನೇ ಎಂದು ತಮ್ಮನ್ನು ತಾವೇ? ಚಿವುಟಿದಂತಾಯಿತು. ಅವಳ ಸನಿಹಕ್ಕೆ ಹೋಗಿ ಅವಳ ಮೈದಡವಿದಾಗ ಲೇಖಕರ ಮನಸ್ಸಿನ ಸಂಶಯಗಳೆಲ್ಲ ದೂರವಾದವು. ಪ್ರಕೃತಿಯ ರೌದ್ರ ಹಾಗೂ ಸೌಮ್ಯ ದರ್ಶನ ನಮ್ಮನ್ನೆಲ್ಲ ಎಷ್ಟುಬೇಕೋ ಅಷ್ಟೆ ಅವಶ್ಯಕ ಮಾತುಕತೆಗಳನ್ನು ಆಡುವುದನ್ನು ಬಿಟ್ಟರೆ ಮೌನವನ್ನು ಅನುಭವಿಸುತ್ತಿದ್ದೆವು.

ಸ್ವಾಮಿ ಸೋಮನಾಥಾನಂದರ ಹಿಮಾಲಯ ಯಾತ್ರೆಯ ಸಂದರ್ಭದಲ್ಲಿ ಅವರು

---

೯. ಸ್ವಾಮಿ ಅಖಂಡಾನಂದ. 'ಹಿಮಾಲಯದ ಮಡಿಲಲ್ಲಿ' ಪು.ಸಂ: ೧೦೭

ಕಂಡ ದೃಶ್ಯಗಳು, ಪ್ರಕೃತಿ ಸೌಂದರ್ಯ ದಿಗ್ಮೂಢರನ್ನಾಗಿಸುತ್ತಿತ್ತು. ಬಟೋಲೆ ಎನ್ನುವ ಪ್ರದೇಶದ ಪರಿಸರ ಕುರಿತು ಈ ರೀತಿ ಹೇಳುತ್ತಾರೆ ಆಗತಾನೆ ಮಳೆ ಹೊಯ್ದು ನಿಂತ ಪ್ರಸಂಗವನ್ನು ಕಂಡು ಸುತ್ತ ಮುತ್ತಲಿರುವ ಗಿಡ ಮರಗಳೆಲ್ಲಾ ಅಭಿಷೇಕವನ್ನು ಮಾಡಿದಂತಿತ್ತು. ಬೆಟ್ಟದ ಕೆಳಗಿರುವ ಕಣಿವೆಯಲ್ಲಿ ನದಿ ಮಂಜಿನ ಮುಂದೆ ಸೋಮಾರಿಯಾಗಿ ಮುಂದುವರೆಯುತ್ತಿತ್ತು. ಮೇಲ್ಗಡೆ ಶುಭ್ರನೀಲಿ ಆಗಸ ರಸ್ತೆಯ ಪಕ್ಕದಲ್ಲಿರುವ Coniferous Trees ನೋಡಲು ರಮ್ಯ ಶಂಖದ ಆಕಾರವಾಗಿ ಒಂದೇ ಸಮನೆ ಮೇಲೆ ಹೋಗುವವು. ಪ್ರಯಾಣದ ಮಧ್ಯ ದಾರಿಯಲ್ಲಿ ಕೆಲವು ಕಡೆ ಫಲಕಗಳನ್ನು ಹೀಗೆ ಹಾಕಿರುತ್ತಾರೆ "ನಿಧಾನವಾಗಿ ಹೋಗಿ ಪ್ರಕೃತಿ ಸೌಂದರ್ಯವನ್ನು ಅನುಭವಿಸಿ, ವೇಗವಾಗಿ ಹೋದರೆ ಮೃತ್ಯುದವಡೆಗೆ ಹೋಗುವಿರಿ", ಎಂದು ಬರೆದಿದೆ. ಆಗ ಲೇಖಕರು "ನಿಧಾನವಾಗಿ ಹೋದರೆ ಈ ಜಗದ ಸೌಂದರ್ಯ, ವೇಗವಾಗಿಹೋದರೆ ಆ ಜಗದ ರಹಸ್ಯ ಕಾಣುವದು", ಸ್ವಾಮಿಜಿಯವರು ಹೇಳುವಂತೆ ಅಮರನಾಥಯಾತ್ರೆಯಲ್ಲೆಲ್ಲಾ ಸರೋವರದ ಮೂರು ಕಡೆಯೂ ಹಿಮಪರ್ವತಗಳಿವೆ. ಆ ಪರ್ವತಕ್ಕೆ ಕೈಲಾಸ ಪರ್ವತವೆಂದು ಹೆಸರು ಅದರ ಮೇಲೆಲ್ಲಾ ಹಿಮ ಯಾವಾಗಲೂ ಗಡ್ಡೆ ಗಡ್ಡೆ ಕಟ್ಟಿಕೊಂಡು ಕ್ರಮೇಣ ಜಾರಿ ಸರೋವರಕ್ಕೆ ಸೇರುತ್ತದೆ. ಸ್ವಾಮಿಜಿಯವರು ಕಂಡ ಈ ಭವ್ಯ ಸೌಂದರ್ಯ ದೃಶ್ಯ ಮತ್ತೆಲ್ಲವನ್ನು ಮರೆಸುವಂತಿತ್ತು. ಇಂತಹ ಪ್ರಕೃತಿ ದೃಶ್ಯವನ್ನು ನೋಡುವುದು ಅಪರೂಪ, ಕಷ್ಟಕ್ಕೆ ತಕ್ಕ ಪ್ರತಿಫಲ ಶೇಷನಾಗ ಸರೋವರಕ್ಕೆ ಬಂದ ಮೇಲೆ ದೊರಕಿತ್ತು ಎನ್ನುತ್ತಾರೆ. ಈ ರೀತಿಯಾಗಿ ವಿವಿಧ ಲೇಖಕರು ಹಿಮಾಲಯ ಕೈಲಾಸ ಮಾನಸ ಪ್ರವಾಸದ ಸಂದರ್ಭದಲ್ಲಿ ಪರಿಸರವನ್ನು ಕಂಡು ತಮ್ಮ ಅಪೂರ್ವ ತಾದ್ಯಾತ್ಮತೆಯನ್ನು ಅಭಿವ್ಯಕ್ತಿಸಿದ ಪ್ರಸಂಗಗಳು ಮನಮುಟ್ಟುವಂತಿದೆ. ಆ ಪರಿಸರವನ್ನು ನಮಗೆ ದರ್ಶಿಸಿದಷ್ಟೆ ಸಂತೋಷವನ್ನುಂಟು ಮಾಡುತ್ತವೆ.

ಸ್ವಾಮಿ ಅಖಂಡಾನಂದರು ಗಂಗೋತ್ರಿಯ ದಾರಿಯಲ್ಲಿ ನಡೆಯತೊಡಗಿದಾಗ ಕಣ್ಣೆದುರು ಹಿಮಾಲಯದ ವೈಭವ ಅನಾವರಣಗೊಳ್ಳುತ್ತದೆ. ಆಮೆಯ ಆಕಾರವನ್ನು ತಳೆದಿದ್ದ ಬೃಹತ್ ಪರ್ವತ ಸಾಲುಗಳು; ಎಲ್ಲವೂ ಮಂಜುಮುಸುಕಿ ಶುಬ್ರ ಬಿಳಿಯ ಬಣ್ಣವನ್ನು ತಳೆದು ಲೇಖಕರೆದುರು ಪ್ರತ್ಯಕ್ಷವಾದವು. ಈ ಪರ್ವತದಿಂದಲೇ ಭಾಗೀರಥಿಯು ವಕ್ರ ತಿರುವುಗಳಲ್ಲಿ ಕೆಳಕ್ಕೆ ಹರಿಯುತ್ತ ಹರ-ಹರ ಎಂದು ಮಂತ್ರೋಚ್ಚಾರಣೆ ಮಾಡುತ್ತಿರುವಳೋ ಎಂಬಂತೆ ಗರ್ಜಿಸತೊಡಗುತ್ತಾಳೆ, ಗಂಗೋತ್ರಿಯಲ್ಲಿ ಗಂಗಾ ಪ್ರವಾಹ ಚಿಕ್ಕದು ನಿಜ ಆದರೆ ಅದಕ್ಕೆ ಇಂದ್ರನ ಬಿಳಿಯ ಆನೆಗಳನ್ನು ಶತಸಂಖ್ಯೆಯಲ್ಲಿ ಕೊಚ್ಚಿಕೊಂಡು ಹೋಗುವಷ್ಟು ಬಲವಿದೆ. ಶ್ವೇತಫೇನದಿಂದ ಕೂಡಿದ ಗಂಗೆ ಅದೆಷ್ಟು ರಭಸವಾಗಿ

ಶಕ್ತಿಯುತವಾಗಿ ಹರಿಯುತ್ತಾಳೆಂದರೆ ಬಹುಶಃ ಪ್ರಾಪಂಚಿಕ ಮಟ್ಟದಲ್ಲಿರುವ ಅಸಂಖ್ಯ ದೇವರುಗಳೆನ್ನೆಲ್ಲ ಒಂದೇ ಸಲಕ್ಕೆ ಪವಿತ್ರಗೊಳಿಸಲು ಹೊರಟಿರುವಳೋ ಎಂಬಂತೆ ಲೇಖಕರ ಕಣ್ಣಿಗೆ ಗೋಚರಿಸುತ್ತದೆ. ಮಂಜು ಮುಸುಕಿರುವ ಉನ್ನತ ಪರ್ವತಾಗ್ರಗಳ ಇಳಿಜಾರುಗಳ ನಡುವೆ ಭಾಗೀರಥಿ ನದಿ ಹರಿದುಕೊಂಡು ಬರುತ್ತದೆ. ಮಂಜು ಮುಸುಕಿದ ಶಿಖರಗಳ ಕೆಳಭಾಗದಲ್ಲಿ ಎತ್ತರವಾದ ಪೈನ್ ಮರಗಳು ಬೆಳೆದಿವೆ. ಬಾಗೀರಥಿಯ ಇಕ್ಕೆಲಗಳಲ್ಲೂ ಅಮೃತಶಿಲೆಯ ಖಂಡಗಳಂತಿರುವ ಅಚ್ಚಬಿಳಿಯ ಬಂಡೆಗಳು ಒಂದರ ಮೇಲೊಂದು ಪೇರಿಸಿಟ್ಟಿರುವಂತೆ ಇವೆ, ವೇದಕಾಲದ ವೇದಿಕೆಯೊಂದನ್ನು ನಿರ್ಮಿಸಿರುವರೋ ಎಂಬಂತೆ ತೋರುತ್ತದೆ. ಸುತ್ತುನೋಟದ ಆ ಪರಿದೃಶ್ಯವು ಅದೆಷ್ಟು ಅದ್ಭುತವಾಗಿತ್ತೆಂದರೆ ಇನ್ನು ಮುಂದೆ ಈ ಭೂಮಿಯ ಮೇಲೆ ನಾವು ಇಲ್ಲವಾಗಿರುವೆನು ಎಂಬ ಭಾವದೊಂದಿಗೆ ಅಖಂಡಾನಂದರು ಅದಕ್ಕೆ ಇಡಿಯಾಗಿ ಸಮರ್ಪಿಸಿಕೊಂಡುಬಿಟ್ಟರು. ಅಂತಹ ದಿವ್ಯ ದೃಶ್ಯವು ಇನ್ನೆಂದೂ ನೋಡುವುದಕ್ಕೆ ಸಿಕ್ಕಲಾರದು ಎಂದೆನಿಸಿ ಬಂಡೆಯಿಂದ ಬಂಡೆಗೆ ಚಲಿಸುತ್ತ ಇಲ್ಲಿ ಸ್ವಲ್ಪ ಹೊತ್ತು ಅಲ್ಲಿ ಸ್ವಲ್ಪ ಹೊತ್ತು ಕುಳಿರುತ್ತಾ ಅದೆಷ್ಟೋ ಹೊತ್ತು ಕಳೆದ, ಲೇಖಕರ ಕಣ್ಣುಗಳಿಗೆ ಇಂದ್ರಿಯಗಳಿಗೆ ಆ ಹಿಮಾಲಯದ ದಿವ್ಯ ಸೌಂದರ್ಯವನ್ನು ಮತ್ತು ಶಾಂತಿಯನ್ನು ಹೀರಲು ಎಷ್ಟು ಸಾಧ್ಯವೋ ಅಷ್ಟನ್ನು ಅವರು ಹೃದಯ ತುಂಬಿ ತುಳುಕುವವರೆಗೆ ಹೀರುತ್ತಾರೆ, ಹೀಗೆಂದು ಹೇಳಿದವರು ಸ್ವಾಮಿ ಅಖಂಡಾನಂದರು ಹಿಮಾಲಯದ ಬೆಡಗು ಸೊಬಗನ್ನು ಅವರು ವರ್ಣಿಸಿದಲ್ಲಿ ನಮಗೆ ಹಿಮಾಲಯದ ದರ್ಶನ ಮಾಡಿದಂತಿದೆ.

ಕೈಲಾಸ ಪರ್ವತವನ್ನು ವರ್ಣಿಸಿದ ಇಲ್ಲಿನ ಲೇಖಕರೇ ಮಾನಸ ಸರೋವರದ ಬಗೆಗೆ ವಿವೇಚಿಸುತ್ತ "ಮಾನಸ ಸರೋವರ ಬ್ರಹ್ಮನ ಮನಸ್ಸಿನಲ್ಲಿ ಮೊದಲು ಸೃಷ್ಟಿಯಾಯಿತಂತೆ. ಹೀಗಾಗಿ ಇದಕ್ಕೆ ಮಾನಸ ಸರೋವರವೆಂದು" ಹೆಸರು ಎಂಬುದಾಗಿ ಹೇಳಿದ್ದಾರೆ. ಕೈಲಾಸ ಪರ್ವತದ ವೈಶಿಷ್ಟ್ಯವಿರುವುದೇ ಅದರ ಭೌತಿಕ ಆಕಾರದಲ್ಲಿ ಸುತ್ತಲಿನ ಅಸಂಖ್ಯಾತ ಎಲ್ಲ ಗುಡ್ಡ ಬೆಟ್ಟಗಳು ಶಿಥಿಲವಾದ ಗರುಸಿನ ಬೆಟ್ಟಗಳಾಗಿವೆ. ಕೈಲಾಸ ಪರ್ವತ ಅಖಂಡ ಕಪ್ಪು ಶಿಲೆಯ ಪರ್ವತ. ಹೀಗಾಗಿ ವರ್ಷದುದ್ದಕ್ಕೆ ಇದರ ಮೇಲೆ ಬೀಳುವ ಹಿಮ ಕರಗದು, ಬೇಸಿಗೆಯಲ್ಲಿ ಅಲ್ಪ ಪ್ರಮಾಣದಲ್ಲಿ ಹಿಮಕರಗಿ ಸುತ್ತಲೂ ತೊರೆಗಳಾಗಿ ಹರಿದರೂ ಪರ್ವತದ ಮೇಲೆ ಸುಮಾರು ಎಂಟೆತ್ತು ಅಡಿ ದಪ್ಪನೆಯ ಹಿಮದ ಹೊದಿಕೆ ಸದಾ ಇದ್ದೇ ಇರುತ್ತದೆ. ಹೀಗಾಗಿ ಶುಭ್ರವಾಗಿ ಸ್ಪಟಿಕದಂತೆ ಕೈಲಾಸ ಪರ್ವತ ದೂರದಿಂದಲೇ ಗೋಚರವಾಗುತ್ತದೆ. ಕೈಲಾಸ ಪರ್ವತದ ಎತ್ತರ ೨೨೦೨೮ ಅಡಿ ಇದ್ದು ಇದು ಸುತ್ತಲಿನ ಎಲ್ಲ ಬೆಟ್ಟಗಳಿಗಿಂತ ಸುಮಾರು ಒಂದು ಸಾವಿರ ಅಡಿ ಎತ್ತರ ಇದೆ. ಸುತ್ತಲಿನ ಬೆಟ್ಟಗಳ

ಮೇಲಿನ ಹಿಮ ಬೇಸಿಗೆಯಲ್ಲಿ ಕರಗಿ ಹರಿದು ಹೋಗಿ ಆ ಬೆಟ್ಟಗಳು ಬೋಳಾಗಿ ಕಾಣುತ್ತಿದ್ದರೆ, ಕೈಲಾಸ ಪರ್ವತದ ಮೇಲಿನ ಹಿಮ ಸದಾಕಾಲ ಇದ್ದು ಬೆಳ್ಳಗೆ ಹೊಳೆಯುತ್ತಿರುತ್ತದೆ. ಇಂತಹ ಅಪೂರ್ವ ಸೌಂದರ್ಯದ ಅಗಾಧತೆಯನ್ನು, ಭವ್ಯತೆಯನ್ನು, ಭಕ್ತಿ ಭಾವುಕತೆಯನ್ನು ಉಂಟುಮಾಡುವ ಈ ಕೈಲಾಸ ಪರ್ವತ ವೀಕ್ಷಿಸಿದ ಲೇಖಕರು, ಅದರ ಎದುರುಗಡೆ ನಿಂತು ಮೂಕವಿಸ್ಮಿತರಾಗುತ್ತಾರೆ. ಹೀಗೆ ಕೈಲಾಸ ಮಾನಸ ಸರೋವರದ ಹಿನ್ನೆಲೆ ಪೌರಾಣಿಕ ಐತಿಹಾಸಿಕ ಮಹತ್ವ ಅದರೊಡನೆ ಭಾರತೀಯರ ನಂಟು ಪ್ರಾಚೀನ ಕಾಲದಿಂದ ಇಲ್ಲಿಯವರೆಗೆ ಮುಂದುವರೆದಿದೆ. ಸಧ್ಯ ಅದನ್ನು ದರ್ಶಿಸಲು ಬೇಕಾದ ದೈಹಿಕ ಸಾಮರ್ಥ್ಯ, ಮನೋಧೈರ್ಯ, ಪ್ರವಾಸಕ್ಕೆ ಬೇಕಾದ ಪೂರ್ವಸಿದ್ಧತೆ, ಪ್ರಕೃತಿ ಪರಿಸರದ ಪರ್ವತಗಳ ಭವ್ಯತೆ ಕಾಣುವ ದೃಷ್ಟಿ ಇತ್ಯಾದಿಗಳಲ್ಲಿ ವಿವೇಚನೆಗಳೊಂದಿಗೆ ಚಿತ್ರಣಗೊಂಡಿದೆ.

# ಅಧ್ಯಾಯ ೫

## ಸಮಾರೋಪ

ಕೈಲಾಸ ಮಾನಸ ಪ್ರವಾಸ ಕಥನಗಳನ್ನು ರಚಿಸಿರುವ ಹಲವಾರು ಲೇಖಕರ ವಿವಿಧ ರೀತಿಯ ಅನುಭವಗಳನ್ನು ವಿಶ್ಲೇಷಿಸಿದಾಗ ಈ ಕೆಳಗಿನಂತೆ ಕಂಡು ಬರುತ್ತವೆ. ಮೊದನೆಯದಾಗಿ ಮಮತಾರಾವ್ ಅವರು ತಿಳಿಸುವಂತೆ ಜೀವನ ಕೈಲಾಸ ಮಾನಸ ಯಾತ್ರೆಯಿಂದ ಪರಮ ಪವಿತ್ರವಾಗಿದೆ ಎಂಬುದು ಮನದಟ್ಟಾಗುತ್ತದೆ. ಹಿಮವಂತನ ಅತ್ಯುನ್ನತ ಶಿಖರದೆಡೆಗೆ ಧಾವಿಸುವವರೆಲ್ಲರಿಗೂ ಕೈಲಾಸ ಮಾನಸವೇ ಕೇಂದ್ರ ಬಿಂದು. ಹಿಂದೂ ಪುರಾಣಗಳು ಕೈಲಾಸವನ್ನು ದೇವತೆಗಳ ಆವಾಸ ಸ್ಥಾನವೆಂದು ಬಣ್ಣಿಸಿವೆ. ಸಂಸ್ಕೃತ ಕವಿಗಳಿಗೆ ಅದೊಂದು ಆಡಂಬೊಲ. ಈಗಿನಂತೆ ಸಕಲ ಸೌಕರ್ಯಗಳಿಲ್ಲದ ಕಾಲದಲ್ಲಿಯೂ ಮೋಕ್ಷ ಪ್ರಾಪ್ತಿಗೆಂದೇ ಮಾನಸದ ಯಾತ್ರೆ ಮಾಡಿದವರುಂಟು, ಕೈಲಾಸ ಮಾನಸ ಯಾತ್ರೆ ಮಾಡಿದವರು ತಿರುಗಿ ಬಾರದವರೂ ಉಂಟು. ಹಿಮಾಲಯ ಎಂಬ ಹೆಸರೇ ಮೈ ರೋಮಾಂಚನಗೊಳಿಸುವಂತಹದು, ಪ್ರತ್ಯೇಕವಾಗಿ ಎಳೆಗೂಸಿನಂತೆ ಹಿಮಾಲಯದ ಮಡಿಲಿಗೆ ಕಾಲಿಟ್ಟರಂತೂ ಆ ಪುಳಕದ ಆನಂದವೇ ಬೇರೆ. ಅದರ ಭವ್ಯತೆಯ ಮುಂದೆ ನಾವೆಷ್ಟು ಕುಬ್ಜರು ಎಂಬ ಭಾವ ಮಮತಾರಾವ್‌ರವರದ್ದಾಗಿತ್ತು; ಈ ರೀತಿಯ ಭಾವುಕ ತನವನ್ನು ಕಟ್ಟಿಕೊಂಡೆ ಇಲ್ಲಿಯ ಪ್ರವಾಸಿ ವರ್ಣನೆಯನ್ನು ನೀಡುತ್ತಾರೆ; ದಿನಾಂಕಗಳನ್ನು ಸೂಚಿಸುತ್ತ ಆಯಾಯ ಕ್ಷಣದ ವಿಷಯಗಳನ್ನು ಓದುಗರೊಡನೆ ಹಂಚಿಕೊಳ್ಳುವ ರೀತಿ ಭಿನ್ನವಾಗಿ ಗೋಚರಿಸುತ್ತದೆ.

ದಿನ ಸರಿದಂತೆಲ್ಲ, ಆಧ್ಯಾತ್ಮ ಆವರಿಸಿಕೊಳ್ಳುವ ಪರವಶತೆಗೂ ಧಾರ್ಮಿಕ ಆಚರಣೆಗಳ ಬಗೆಗೆ ವಿಶ್ವಾಸವಿಲ್ಲದ ಮನಸ್ಸಿಗೂ ಒಂದು ಬಗೆಯ ಸಂಘರ್ಷವಂತೂ ಖಂಡಿತವಾಗಿ ಹುಟ್ಟಿರುತ್ತದೆ. ಆಗ ಹತ್ತರೊಡನೆ ಹನ್ನೊಂದು ಇದೊಂದು ಪರಿಹಾರವೆನಿಸದೇ ಪುರಾಣ ಕಲ್ಪನೆಗಳನ್ನು ಸಾಂಸ್ಕೃತಿಕ ಕಾಳಜಿಯನ್ನು ಮುಂದೊಡ್ಡುವುದು ಇಲ್ಲಿಯ ವೈಶಿಷ್ಟ್ಯ.

ಹಿಮದ ಮೇಲೆ ಸಹಜವಾಗಿ ಉರುಳುವ ಉಲ್ಕೆಗಳ ದೃಶ್ಯವನ್ನು ಬಣ್ಣಿಸುವಲ್ಲಿ ಮಗುವಿನಂತಹ ಕುತೂಹಲ ಕಂಡುಬರುತ್ತದೆ; ಧನ್ಯತೆಯ ಸಂತೃಪ್ತಿ ಎದ್ದುಕಾಣುತ್ತದೆ.

ಕೆ.ಸತ್ಯನಾರಾಯಣರ 'ಸದ್ದು! ದೇವರು ಸ್ನಾನ ಮಾಡುತಿದ್ದಾರೆ' ಎಂಬ ಪ್ರವಾಸ ಸಾಹಿತ್ಯವನ್ನು ಗಮನಿಸಿದಾಗ ನನಗೆ ಹೀಗೆನ್ನಿಸುತ್ತದೆ, ಈ ಕೃತಿಯ ವಿಶೇಷತೆ ಲೌಕಿಕ, ದೈಹಿಕ, ದೈನಂದಿನ ತಾಪತ್ರಯಗಳ ಅನುಭವಗಳಲ್ಲಿ ತೊಡಗಿ ಮನುಷ್ಯನ ವರ್ತನಾ ವೈವಿಧ್ಯ, ಪೊಳ್ಳು ಧಾರ್ಮಿಕತೆಯನ್ನು ಪರಿಶೀಲಿಸಿ ಕೊನೆಗೆ ಪ್ರಕೃತಿಯ ಉನ್ನತ ಸತ್ಯವನ್ನು ದರ್ಶಿಸುತ್ತಾ ಒಂದು ಲೌಕಿಕ ಅನುಭೂತಿಯನ್ನು ಹೊಂದಲು ಸಾಧ್ಯ ಎಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ. ಕನ್ನಡದಲ್ಲಿ ಪ್ರವಾಸ ಸಾಹಿತ್ಯ ಹೆಚ್ಚಾಗಿ ಇಲ್ಲ ಅದರಲ್ಲೂ ಇಂತಹ ಪವಿತ್ರ ಯಾತ್ರೆಯ ತೀರ್ಥಸಾಹಿತ್ಯ "ಹಿಮಾಲಯ ಯಾತ್ರೆ" ಎಂಬ ವಿಭಾಗದಲ್ಲಿ ಹಿಂದಿನದಕ್ಕಿಂತಲೂ ಸಮಧಿಕತರವಾದ ಔತಣವನ್ನು ಉಣಬಡಿಸಿದ್ದಾರೆ. ಸ್ವಾಮಿಗಳ ಬರವಣಿಗೆಯಲ್ಲಿ ಅಲ್ಲಲ್ಲಿ ಹಿಮಾಲಯದ ಪ್ರಕೃತಿ ದೃಶ್ಯಪರಂಪರೆಯ ಸುಂದರ ವರ್ಣನೆ ಕಾವ್ಯಮಯವಾಗಿ ಮೂಡಿ ಬಂದಿದೆ. ನದಿ, ಪರ್ವತ, ಶಿಖರ, ಕಾನನ, ಮೇಘಮಾಲೆ, ವಿಶಾಲ ಗಗನ, ಚಂದ್ರೋದಯ, ಹಿಮರಾಶಿ, ತುಷಾರಪಂಕ್ತಿಯ ಮೇಲೆ ಬೀಳುವ ಬಿಸಿಲು ಬೆಳದಿಂಗಳ ವರ್ಣಮಯ ಮೋಹಕತೆ ಮೊದಲಾದ ನೂರಾರು ಚಿತ್ರಗಳು ಒಮ್ಮೆ ಮುದ್ದಾಗಿ, ಒಮ್ಮೆ ಚೆಲುವಾಗಿ, ಒಮ್ಮೆ ಸುಂದರವಾಗಿ, ಒಮ್ಮೆ ಮಹತ್ತಾಗಿ, ಒಮ್ಮೆ ಭವ್ಯವಾಗಿ ನಾನಾ ಭಾವ ಭಂಗಿಗಳಲ್ಲಿ ಪ್ರವಾಸಿಗರ ಬರಿಗಣ್ಣಿಗೆ ಸುಳಿಯುತ್ತವೆ! ಭಾರತೀಯ ಸಂಸ್ಕೃತಿ ಈ ರಮಣೀಯ ಪ್ರಕೃತಿ ಸ್ಥಾನಗಳನ್ನು ಹೀಗೆ ಆಧ್ಯಾತ್ಮಕತೆಗೆ ಉಪಯೋಗಿಸಿಕೊಂಡಿದೆ ಎಂಬ ವಿಚಾರವಾಗಿ ಲೇಖಕರು ಹೇಳುವ ಮಾತುಗಳು ಗಮನಾರ್ಹವಗಿವೆ.

ಕೈಲಾಸ ಮಾನಸದ ವಿಶ್ಲೇಷಣೆಯನ್ನು ಗೈದ ಡಾ. ವ್ಹಿ.ಎಸ್.ಮಾಳಿಯವರ ವಿಚಾರಗಳು ಹೀಗಿವೆ : ಲೇಖಕರು ಕೈಲಾಸ ದಾರಿಯ ಅಂಗುಲ ಅಂಗುಲದ ವಿವರಗಳನ್ನು ದಾಖಲಿಸುತ್ತಾರೆ. ಪುರಾಣ, ಐತಿಹ್ಯ, ನಂಬಿಗೆ, ಸ್ಥಳಿಯ ಇತಿಹಾಸ – ಭೂಗೋಳ ರಾಜಕೀಯ ವಿದ್ಯಮಾನ, ಜನರ ಜೀವನ ವಿಧಾನ ಇತ್ಯಾದಿ ವಿಷಯಗಳೆಲ್ಲವನ್ನು ಪರಿಚಯಿಸುವುದು ಅವರ ವೈಶಿಷ್ಟ್ಯ. 'ಕಠ್ಮಂಡು' ಅಧ್ಯಾಯದಲ್ಲಿ ಕಠ್ಮಂಡು ನಗರ, ಭಾಗಮತಿ ನದಿ, ಪಶುಪತಿನಾಥ ದೇವಾಲಯ, ಬುಧ್ಧ ನೀಲಕಂಠ ಮಂದಿರ, ಸ್ವಯಂಭೂನಾಥ, ಬುಧ್ಧ ವಿಹಾರ, ಬಾಲಕುಮಾರಿ ಮಂದಿರಗಳ ವೀಕ್ಷಕ ವಿವರಣೆ ಓದುಗರಿಗೆ ಅದ್ಭುತ ಅನುಭವ ಕಂಡುಬರುತ್ತದೆ. ಆದರೆ ಅಲ್ಲಿ ತೀವ್ರ ಗಮನ ಸೆಳೆಯುವ ಭಾಗವೆಂದರೆ ಕಠ್ಮಂಡುವಿನಿಂದ ಅತಾರಿವರೆಗಿನ ೮೦ ಕಿ.ಮೀ. ದಾರಿಯ ಬಸ್ ಪ್ರಯಾಣದ ಅನುಭವ ಅದೊಂದು ಕಲ್ಲು ಸಕ್ಕರೆ ತುಂಡು, ಹಿಮಾಲಯದ ಮಡಿಲಲ್ಲಿ ನೇಪಾಳದ ಗ್ರಾಮೀಣ ಭಾಗದ ರಮ್ಯ ಚಿತ್ರಣ ಆ

ರಮ್ಯ ನೋಟದ ಶಬ್ದಚಿತ್ರ ಹಿಮಾಲಯದ ದೃಶ್ಯಕಾವ್ಯಕ್ಕೊಂದು ಬೆಳ್ಳಿಯಂಚು ನಿರ್ಮಿಸಿದೆ, ಪ್ರವಾಸ ಕಥನವೆಂದರೆ ಪ್ರವಾಸಿ ತಾಣವೊಂದರ ಕುರಿತು ವಿವಿಧ ಪುಸ್ತಕ, ಪತ್ರಿಕೆ ಅಂತರಜಾಲಗಳಲ್ಲಿಯ ಲಭ್ಯ ಮಾಹಿತಿಗಳನ್ನು ಒತ್ತಟ್ಟಿಗೆ ಸಂಗ್ರಹಿಸುವ ಪ್ರವಾಸದ ದಾರಿಗಳನ್ನು ಸೂಚಿಸುವ ನಕ್ಷೆಗಳು ಪ್ರವಾಸಿಗರ ಕೈಪಿಡಿಯಲ್ಲಿ ಪ್ರವಾಸಿಗನೊಬ್ಬ ತಾನು ಕೈಗೊಂಡ ಪ್ರವಾಸದ ಅನುಭೂತಿಯ ಅಭಿವ್ಯಕ್ತಿ ಹಿಮಾಲಯದ ಎತ್ತರ ವಿಸ್ತೀರ್ಣ, ವೈವಿಧ್ಯತೆ, ಜೀವ ಜಲ ಸಂಪತ್ತು, ಅದನ್ನು ಹತ್ತಿ ಇಳಿದವರ ನಡುವೆ ಸತ್ತವರ ವಿವರಗಳು ಮುಖ್ಯವಾಗುವುದಿಲ್ಲ. ಒಬ್ಬ ಪ್ರವಾಸಿಯಾಗಿ ಮಾಚಕನೂರರು ಹಿಮಾಲಯವನ್ನು ಹೃದಯಸ್ಪರ್ಶಿಯಾಗಿ ಅನುಭವಿಸುತ್ತಾರೆ, ಮತ್ತು ಅದನ್ನು ಎಷ್ಟು ಸಶಕ್ತವಾಗಿ ಅಭಿವ್ಯಕ್ತಿಸುತ್ತಾರೆ ಎಂಬುದೇ ಪ್ರಧಾನ ಸಂಗತಿ, ದರ್ಶನ ಮತ್ತು ವರ್ಣನೆಗಳ ಸಮೀಕರಣದ ಒರೆಗಲ್ಲು ಅವಲೋಕನ ಹಿಮಗಿರಿಯ ಕಂದರಗಳಲ್ಲಿ ಬದುಕು ಕಟ್ಟಿಕೊಳ್ಳಲು ಒದ್ದಾಡುವ ಆ ಜನರ ಸಂಘರ್ಷದ ಚಿತ್ರಣ ಮಾಚಕನೂರರ ಚಿತ್ರದ ಶಕ್ತಿಯನ್ನು ಸಾಕ್ಷೀಕರಿಸುತ್ತದೆ.

ಒಂದು ಕಡೆ ಎತ್ತರವಾದ ಹಿಮಾಲಯ ಪರ್ವತಗಳು, ಮತ್ತೊಂದೆಡೆ ಆಳವಾದ ಕೊಳ್ಳ, ಅಲ್ಲೆಲ್ಲೋ ಭಾರದಿಂದ ಹರಿಯುವ ಹೊಳೆ, ಅಲ್ಲಲ್ಲಿ ಸ್ವಲ್ಪ ಸಮತಟ್ಟಾದ ಪ್ರದೇಶದಲ್ಲಿ ಜನವಸತಿ ಮನೆಮಠಗಳು, ಆದರೆ ಬಹಳಷ್ಟು ಕಡೆ ಪರ್ವತದ ಓರೆ ಪ್ರದೇಶದ ಇಳಿಜಾರಿನಲ್ಲಿಯೇ ಮನೆಕಟ್ಟಿಕೊಂಡು ವಾಸವಾಗಿರುವ ಜನ ಹಿಮಾಲಯವನ್ನು ಒತ್ತಿ ಉದರ ಪೋಷಣೆಗಾಗಿ ಅಷ್ಟಿಷ್ಟು ಜಮೀನನ್ನು ಹಿಮಾಲಯದಿಂದ ಕೇಳಿ ಪಡೆದು ಸಾಗುವಳಿ ಮಾಡಿಕೊಂಡಿದ್ದ ದೃಶ್ಯಗಳು ಸೃಷ್ಟಿಯೊಂದಿಗೆ ಮಾನವ ಹೋರಾಡಿ ರಾಜಿ ಮಾಡಿಕೊಂಡು ಬದುಕು ಕಟ್ಟಿಕೊಳ್ಳುವ ಪರಿ ಹಿಮಾಲಯದ ಪರಿಸರದ್ದು ಎಂಬುದನ್ನು ಮಾಚಕನೂರರ ದೃಷ್ಟಿಯನ್ನು ಉಳಿದೆಲ್ಲ ಲೇಖಕರು ಒಪ್ಪಿಕೊಳ್ಳುತ್ತಾರೆ.

ಕೈಲಾಸ ಮಾನಸ ಸರೋವರ ಯಾತ್ರೆಯು ತೀರ್ಥಯಾತ್ರೆಗಳಲ್ಲೆಲ್ಲಾ ಅತ್ಯಂತ ರೋಚಕವಾದುದು; ಸ್ಮರಣೀಯ ಅನುಭವವನ್ನು ನೀಡುವಂಥದ್ದು, ಭಕ್ತಿ ಸಿದ್ಧಾಂತದ ಪ್ರಕಾರ ಮನುಕುಲದ ಧ್ಯೇಯ ಸಾಧನೆಗೆ, ಪಾಪ ವಿಮೋಚನೆಗೆ, ಪುಣ್ಯಸಂಪಾದನೆಗಾಗಿ ಪರಮಶ್ರೇಷ್ಠವಾದ ತೀರ್ಥದರ್ಶನ ಜೀವನದಲ್ಲಿ ಹೆಚ್ಚು ಮಹತ್ವಪೂರ್ಣವಾದುದು. ಪ್ರಸಿದ್ಧ ಕೇತ್ರಗಳ ಸಂದರ್ಶನ, ಅವುಗಳ ಸ್ಪರ್ಶನ ಅಗತ್ಯವಾಗಿದೆ. ಮಹಾನ್ ಲೀಲಾಪುರುಷರಾದ ಶ್ರೀ ರಾಮಕೃಷ್ಣ ಪರಮಹಂಸರು ಹಾಗೂ ಶ್ರೀ ಸ್ವಾಮಿ ವಿವೇಕಾನಂದರು ಸೂಚಿಸುವಂತೆ ಯಾತ್ರಾಸ್ಥಳಗಳ ಅಥವಾ ಜಾಗೃತ ಸ್ಥಳಗಳ ಭೇಟಿ ಜೀವನಕ್ಕೆ ಅವಶ್ಯಕವೂ ಕೂಡಾ ಹೌದು ಎಂದು ತಿಳಿಸುತ್ತಾರೆ. ತೀರ್ಥಕ್ಷೇತ್ರಗಳು ಎಂದರೆ ಭಗವಂತನು ಸುಸ್ಪಷ್ಟವಾಗಿ, ಶಕ್ತಿಯುತವಾಗಿ ಪ್ರಕಟಣೆಗೊಳ್ಳುವ ಸ್ಥಳಗಳು, ಏಕೆಂದರೆ ಅಲ್ಲಿ ಅನಾದಿಕಾಲದಿಂದಲೂ ಭಕ್ತರು ಜಪ, ಧ್ಯಾನ,

ತಪಸ್ಸಾಧನೆಗಳ ಮೂಲಕ ಮನಃ ಪೂರ್ವಕವಾಗಿ ಭಗವಂತನನ್ನು ಕುರಿತು ಚಿಂತಿಸುವುದು ಕಂಡುಬರುತ್ತದೆ.

ಕೈಲಾಸ ಮಾನಸ ಯಾತ್ರೆಯನ್ನು ಕೈಗೊಂಡ ಯಾತ್ರಾರ್ಥಿಗಳು ತಾವು ಕಂಡುಂಡ ಅನುಭವದ ಮಹಲಿನಲ್ಲಿ ಓದುಗನಿಗೆ ವಾಸಮಾಡಲು ಬಿಟ್ಟಂತಾಗಿದೆ. ಹಲವಾರು ಪ್ರವಾಸ ಸಾಹಿತ್ಯದ ಪುಸ್ತಕಗಳನ್ನು ಗಮನಿಸಲಾಗಿ ದಿನಾಂಕ, ಸಮಯ ಎಲ್ಲವನ್ನು ಒಳಗೊಂಡ ಯಾತ್ರಾ ಅನುಭವಗಳು ಓದುಗರಿಗೆ ಅಲ್ಲಿನ ಪರಿಸರ ಇತಿಹಾಸ ಜನಜೀವನ ಸಂಸ್ಕೃತಿ ಪರಂಪರೆ ಮಳೆ, ಬೆಳೆ, ಕೃಷಿ, ಸಾಮಾಜಿಕ ಬದುಕು, ಬಡವಾಗಿರುವ ಜನರ ತೊಳಲಾಟ ಮುಂತಾದ ಎಲ್ಲಾ ಅಂಶಗಳನ್ನು ಗಟ್ಟಿಮುಟ್ಟಾಗಿ ಮನಮುಟ್ಟುವಂತೆ ಚಿತ್ರಿಸಿದ್ದಾರೆ, ಅಲ್ಲದೆ ಓದುಗನಿಗೆ ಕೈಲಾಸ ಪರ್ವತ, ಮಾನಸ ಸರೋವರ, ಗೌರಿಕುಂಡ, ಕಾಳಿನದಿ ಅದರ ಬೋರ್ಗರೆತ ಕಣ್ಣೆದುರಿಗೆ ಭಾಸವಾಗುತ್ತದೆ. ಭಾರತೀಯ ಸಂದರ್ಭದಲ್ಲಿ ಪ್ರವಾಸ ಎಂಬುದು ತೀರ್ಥಯಾತ್ರೆಯೇ ಎಂದು ಭಾವಿಸಿದ ಕಾಲ ಒಂದಿತ್ತು. ಪುಣ್ಯಕ್ಷೇತ್ರದ ದರ್ಶನ, ಪಾಪ ಪರಿಹಾರ ಮೋಕ್ಷ ಸಂಪಾದನೆ, ದೇವರ ಹತ್ತಿರ ಹೋಗಿಬರುವುದು ಇಂಥ ಧಾರ್ಮಿಕ ದೃಷ್ಟಿಯೇ ಪ್ರಧಾನವಾಗಿತ್ತು. ನಮ್ಮ ಅಧ್ಯಯನ ಅಧ್ಯಾಪನಗಳು ಬೆಳೆದಂತೆಲ್ಲಾ ಪ್ರವಾಸದ ಉದ್ದೇಶಗಳು ಬೇರೆಯಾದವು. ನಂತರ ಸಾಹಿತ್ಯ, ಸಂಸ್ಕೃತಿ, ನಾಗರೀಕತೆ, ಭೌಗೋಳಿಕ ದೃಷ್ಟಿಕೋನ, ಅನ್ವೇಷಕಗುಣ ಮುಖ್ಯವಾಗಿ ಆಯ್ದ ದೇಶಗಳ ಪ್ರವಾಸ, ಭಾರತ ಪ್ರವಾಸ, ಕನ್ನಡನಾಡಿನ ಪ್ರವಾಸದಂತಹ ವೈವಿಧ್ಯಮಯ ಅನುಭವಗಳು ಪ್ರವಾಸ ಸಾಹಿತ್ಯ ಪ್ರಕಾರವಾಗಿ ರೂಪುಗೊಂಡಿವೆ.

ಪ್ರಾಚೀನ ಕಾಲದ ಕಲ್ಹಣ, ರಾಜೋನರಾಜ, ಶ್ರೀವರ, ಪ್ರಾಜ್ಯಭಟ್ಟಶುಕ, ಸೋಮೇಶ್ವರ ಮುಂತಾದ ಪಂಡಿತರ ಬರಹಗಳು ನಮ್ಮಲ್ಲಿವೆ. ನಂತರ ಮಾರ್ಕೋ, ಪೋಲೋ, ಕೋಲಂಬಸ್, ವಾಸ್ಕೋಡಿಗಾಮಾ, ಫಾಹಿಯಾನ್, ಹುಯೆನ್‌ತ್ಸಾಂಗ್ ಮುಂತಾದ ವಿದೇಶಿ ಪ್ರವಾಸಿಗರ ಬರಹಗಳನ್ನು ಎಚ್.ಎಲ್. ನಾಗೇಗೌಡರು ಅನುವಾದದ ಮೂಲಕ 'ಪ್ರವಾಸಿಕಂಡ ಭಾರತ' ಸಂಪುಟಗಳಲ್ಲಿ ಭಾರತದ ಬಗೆಗಿನ ವಿದೇಶಿ ಪ್ರವಾಸಿಗರ ಅನುಭವವನ್ನು ಕನ್ನಡಕ್ಕೆ ತಂದರು. ಪ್ರಾಯಶಃ ೧೮೮೫ ರಲ್ಲಿ ಪ್ರಕಟಗೊಂಡ ವೆಂಕಟರಮಣಶಾಸ್ತ್ರಿಯವರ "ದಕ್ಷಿಣ ಭಾರತ ಯಾತ್ರೆ" ಕನ್ನಡದ ಮೊದಲ ಪ್ರವಾಸ ಸಾಹಿತ್ಯವಾಗಿದೆ. ನಂತರ ಪಂಪಯಾತ್ರೆ ಇತ್ಯಾದಿ ಕೃತಿಗಳು ಬಂದವು. ಬೇರೆ ಬೇರೆ ಉದ್ದೇಶಗಳಿಗಾಗಿ ವಿದೇಶಿಯಾತ್ರೆ ಮಾಡಿದ ಕನ್ನಡದ ವಿದ್ವಾಂಸರಾದ ವಿ.ಕೃ.ಗೋಕಾಕ, ಶಿವರಾಮ ಕಾರಂತ, ದಿನಕರ ದೇಸಾಯಿ, ರಾ.ಶಿ, ರಾ.ಯ.ಧಾರವಾಡಕರ, ಜಿ.ಎಸ್.ಶಿವರುದ್ರಪ್ಪ, ಕೃಷ್ಣಾನಂದ ಕಾಮತ್, ದೇ.ಜವರೆಗೌಡ, ಸಿದ್ದವನಹಳ್ಳಿ ಕೃಷ್ಣಶರ್ಮ,

ಮಿರ್ಜಿ ಅಣ್ಣಾರಾಯ, ಬಿ.ಜಿ.ಎಲ್ ಸ್ವಾಮಿ, ಗೋರೂರು ರಾಮಸ್ವಾಮಿ ಅಯ್ಯಂಗಾರ, ಪ್ರಭುಶಂಕರ ಇತ್ಯಾದಿ ಅನೇಕರು ಪ್ರವಾಸ ಕಥನ ಬರೆದು ಕನ್ನಡದಲ್ಲಿ ಪ್ರವಾಸ ಸಾಹಿತ್ಯವನ್ನು ಸಮೃದ್ಧವಾಗಿ ಬೆಳೆಸಿದರು ಈ ಮಾಲಿಕೆಯಲ್ಲಿ ಇತ್ತೀಚೆಗೆ ಸೇರಿದ ವೆಂಕಟೇಶ ಮಾಚಕನೂರರ ಪ್ರವಾಸದ ಅನುಭವ ಅಭಿವ್ಯಕ್ತಿ ಅನನ್ಯವಾದುದಾಗಿದೆ.

"ಪ್ರವಾಸ ಮಾಡುವುದು ಒಳ್ಳೆಯದು, ಹಾಗೆ ಪ್ರವಾಸ ಮಾಡಲಾರದೇ ಹೋದಾಗ ಪ್ರವಾಸದ ಬಗೆಗೆ ಬಂದಿರುವ ಸಾಹಿತ್ಯವನ್ನಾದರೂ ಓದುವುದು ಉತ್ತಮ ಹವ್ಯಾಸ". ಪ್ರಾಚೀನ ಕಾಲದ ಗುರುಕುಲ ಶಿಕ್ಷಣ ಪದ್ಧತಿಯಲ್ಲಿ 'ಅಮರಕೋಶ' ಇತ್ಯಾದಿ ಕೋಶಗಳ ಅಧ್ಯಯನ ಕಡ್ಡಾಯವಾಗಿದ್ದಂತೆ. ಅಧ್ಯಯನಾರ್ಥಿ ತನ್ನ ಶಿಕ್ಷಣ ಸಂಪೂರ್ಣಗೊಳಿಸಿದ ಮೇಲೆ ದೇಶದ ವಿವಿಧ ಭಾಗಗಳ ಪ್ರವಾಸಮಾಡಿ ಅನುಭವ ಸಂಪಾದಿಸುವುದು ಪ್ರಾಯೋಗಿಕ ಅನುಭವ ಪಡೆಯುವುದು ಕೂಡ ಕಡ್ಡಾಯವಾಗಿರುತ್ತಿತ್ತು, ಇದರಿಂದಾಗಿ ಆಶ್ರಮದ ಗುರುಕುಲದ ಗುರು ಮುಖೇನ ಪಡೆದ ಶಿಕ್ಷಣ ಒಂದು ನಿಟ್ಟಿನ ಶಾಸ್ತ್ರಗಳ ಜ್ಞಾನ ನೀಡಿದರೆ, ಯಾತ್ರೆ ಲೋಕವ್ಯವಹಾರವನ್ನು, ಅನುಭಾವದ ಆಳಕ್ಕೆ ಇಳಿಸಿ ಜ್ಞಾನದ ಪರೀಧಿಯನ್ನು ವಿಸ್ತರಿಸಿ ಸಾಧಕನಲ್ಲಿರುವ ಸಂಕುಚಿತ ಭಾವನೆಗಳನ್ನು ದೂರವಾಗಿಸುತ್ತಿತ್ತು. ಹೀಗಾಗಿ ಇಂದಿಗೂ ಶೈಕ್ಷಣಿಕ ಪ್ರವಾಸವೆಂಬುದು ಶಿಕ್ಷಣದ ಒಂದು ಭಾಗವಾಗಿದ್ದರೂ ಅನುಷ್ಠಾನಕ್ಕೆ ತರುವವರಲ್ಲಿ ದೂರದೃಷ್ಟಿ ವಿದ್ಯಾರ್ಥಿಗಳ ಸರ್ವಾಂಗೀಣ ಬೆಳವಣಿಗೆಯ ಬಗೆಗಿನ ಕಾಳಜಿ ಇಲ್ಲವಾಗಿ ನೇಪಥ್ಯಕ್ಕೆ ಸರಿದಿದೆ. ಕೋಶ ಓದಿ–ಜ್ಞಾನ ಸಂಪಾದನೆ ಒಂದು ನಿಟ್ಟಿನದ್ದಾಗಿದ್ದರೆ, ಪಠ್ಯಕ್ಕೆ ಪೂರಕವಾಗಿ ಶೈಕ್ಷಣಿಕ ಪ್ರವಾಸ ಕೈಗೊಂಡು ಅನ್ವಯಿಕ ಜ್ಞಾನ ಸಂಪಾದನೆ ಪಡೆದು ವಿದ್ಯಾರ್ಥಿಗಳ ಸಂಪೂರ್ಣ ಬೆಳವಣಿಗೆಗೆ ಕಾರಣವಾಗಬೇಕಾಗಿದ್ದ ನಮ್ಮ ಶೈಕ್ಷಣಿಕ ವ್ಯವಸ್ಥೆಯಲ್ಲಿ ಪ್ರವಾಸ ಎಂಬುದು ಒಂದು ಕಡೆ ಪ್ರಯಾಸವಾಗಿದೆ. ಇನ್ನೊಂದು ಕಡೆ ಮೋಜು ಮಜಾವೆನಿಸಿ ತನ್ನ ಮೂಲ ಉದ್ದೇಶದಿಂದ ದೂರ ಸರಿದು ವಿಧ್ಯಾರ್ಥಿಗಳ ಏಕಮುಖ ಬೆಳವಣಿಗೆಯಿಂದಾಗಿ ಆಧುನಿಕ ಶೈಕ್ಷಣಿಕ ವ್ಯವಸ್ಥೆ ಅನೇಕ ನೂನ್ಯತೆಗಳಿಂದ ಬಳಲುತ್ತಿದೆ.

ಇಂದು ಕೋಶ ಓದುವವರ ಸಂಖ್ಯೆ ಹೆಚ್ಚಾಗಿದೆ. ಹಾಗೆಯೇ ಪ್ರವಾಸ ಮಾಡುವವರ ಸಂಖ್ಯೆಯು ಹೆಚ್ಚಾಗಿದೆ. ಓದುವವರೆಲ್ಲರು ಪ್ರವಾಸಮಾಡಲು ಸಾಧ್ಯವಾಗುತ್ತಿಲ್ಲ. ಹಾಗೆಯೇ ಪ್ರವಾಸ ಮಾಡಿದವರೆಲ್ಲರೂ ತಮ್ಮ ಅನುಭವ ಅಭಿವ್ಯಕ್ತಿಸಲು ಸಮರ್ಥರಿಲ್ಲ ಆದರೂ ಕಳೆದ ಶತಮಾನದಲ್ಲಿ ಇಂಗ್ಲೀಷ ಪದ್ದತಿಯ ಶೈಕ್ಷಣಿಕ ವ್ಯವಸ್ಥೆಯಿಂದಾಗಿ ಪ್ರವಾಸ ಸಾಹಿತ್ಯದ ಪರಿಚಯ ಕನ್ನಡಗರಿಗಾಗಿದೆ. ಅನೇಕರು ಶಿಕ್ಷಣ ಪಡೆಯುವುದಕ್ಕಾಗಿ, ವಿದೇಶಕ್ಕೆ ಹೋಗಿ ಬಂದವರು, ಸಾಹಿತ್ಯ ಸಂಸ್ಕೃತಿ ಅಧ್ಯಯನಕ್ಕಾಗಿ ವ್ಯಾಪಾರ ವಾಣಿಜ್ಯಕ್ಕಾಗಿ ಧರ್ಮಪ್ರಸಾರ

ಇತ್ಯಾದಿ ಕಾರಣಕ್ಕಾಗಿ ದೇಶ–ವಿದೇಶ ಪ್ರವಾಸ ಮಾಡಿದ ನಮ್ಮ ಹಿರಿಯ ವಿದ್ವಾಂಸರು ಸಾಹಿತಿಗಳು ಲೇಖಕರು ತಮ್ಮ ಪ್ರವಾಸದ ಅನುಭವವನ್ನು ಶಬ್ದಗಳ ಮೂಲಕ ದಾಖಲಿಸಿದ್ದಾರೆ. ಈ ಪ್ರವಾಸದ ಕಥನಗಳು ಇಂಗ್ಲೀಷ ಸಾಹಿತ್ಯದ ಪ್ರಭಾವದಿಂದ ಹುಟ್ಟಿದರೂ ಅದರ ಉದ್ದೇಶ ಧೋರಣೆಗಳಿಂದಾಗಿ ವಿದೇಶದ ವಿದ್ವಾಂಸರಿಗಿಂತ ಭಿನ್ನವಾಗಿವೆ. ತಮ್ಮ ಅನನ್ಯತೆಯನ್ನು ಕಾಪಾಡಿಕೊಂಡು ಬಂದಿವೆ.

# ಅನುಬಂಧ – ೧

## ಕೈಲಾಸ ಮಾರ್ಗಗಳು

| ಮಮತಾರಾವ್ | ಕೆ.ಸತ್ಯನಾರಾಯಣ | ವೆಂಕಟೇಶ ಮಾಚಕನೂರ | ಸ್ವಾಮಿ ಅಖಂಡಾನಂದರು | ಸ್ವಾಮಿ ಸೋಮನಾಥಾನಂದರು |
|---|---|---|---|---|
| ಮುಂಬೈ | ಬೆಂಗಳೂರು | ಧಾರವಾಡ | ದೆಹಲಿ | ದೆಹಲಿ |
| ದೆಹಲಿ | ದೆಹಲಿ | ಬೆಂಗಳೂರು | ಹರಿದ್ವಾರ | ಹರಿದ್ವಾರ |
| ಅಲ್ಮೋರಾ | ಚೀನಾ | ದೆಹಲಿ | ಹೃಷಿಕೇಶ | ಹೃಷಿಕೇಶ |
| ದಾರ್ಚುಲಾ | ಟಿಬೇಟ್ | ಕಠ್ಮಂಡು(ನೇಪಾಳ) | ದೇವಪ್ರಯಾಗ | ದೇವಪ್ರಯಾಗ |
| ಗಾಲಾ | ದಾರ್ಚುಲಾ | ನ್ಯಾಲಂ | ರುದ್ರಪ್ರಯಾಗ | ರುದ್ರಪ್ರಯಾಗ |
| ಬುಧಿ | ಗಾಲಾ | ಸಾಗಾ | ಅಗಸ್ತ್ಯಮುನಿ | ಅಗಸ್ತ್ಯಮುನಿ |
| ಗುಂಜಿ | ಬುಧಿ | ಪರ್ಯಾಂಗ | ಊಖೀಮಠ | ಊಖೀಮಠ |
| ಕಾಲಾಪಾನಿ | ಗುಂಜಿ | ದರ್ಚ್ಚನ್ | ಜೋಶಿಮಠ | ಜೋಶಿಮಠ |
| ನಾಭಿಢಾಂಗ್ | ಕಾಲಾಪಾನಿ | ದಿರಪುಕ್ | ಬದರಿನಾಥ | ಬದರಿನಾಥ |
| ಲಿಪುಲೇಕ್ | ನಾಭಿಢಾಂಗ್ | ಡೋಲ್ಮಾ ಲಾ ಪಾಸ್ | ತ್ರಿಪಾಣಿ | ತ್ರಿಪಾಣಿ |
| ತಕಲಾಕೋಟ್ | ಲಿಪುಲೇಕ್ | ಕೈಲಾಸ ಮಾನಸ | ಉತ್ತರಕಾಶಿ | ಉತ್ತರಕಾಶಿ |
| ದಾರ್ಚನ್ | ತಕಲಾಕೋಟ್ | | ಗಂಗೋತ್ರಿ | ಗಂಗೋತ್ರಿ |
| ಡೋಲ್ಮಾ ಲಾ ಪಾಸ್ | ದಾರ್ಚನ್ | | ನಂದಿ | ನಂದಿ |
| ತೀರ್ಥಪುರಿ | ಡೋಲ್ಮಾ ಲಾ ಪಾಸ್ | | ಕೈಲಾಸ ಮಾನಸ | ಕೈಲಾಸ ಮಾನಸ |
| ಕೈಲಾಸ ಮಾನಸ | ತೀರ್ಥಪುರಿ | | | |
| | ಕೈಲಾಸ ಮಾನಸ | | | |

# ಅನುಬಂಧ - ೨




ದೆಹಲಿಯಿಂದ ಕೈಲಾಸ ಮಾನಸಕ್ಕೆ ಮಾರ್ಗ




ಕೈಲಾಸ ಮಾನಸಕ್ಕೆ ಮಾರ್ಗಸೂಚಿಪಟ




ಕೈಲಾಸ ಮಾನಸಕ್ಕೆ ಮಾರ್ಗ




ಭಾರತದಿಂದ ಕೈಲಾಸ ಮಾನಸಕ್ಕೆ ಮಾರ್ಗ

## ಅನುಬಂಧ - ೩



ವಿಮಾನ ಯಾನದ ಮುಖಾಂತರ ಹಿಮಾಲಯ ಶಿಖರಗಳ ದರ್ಶನ



ಲ್ಯಾಂಡ್ ಕ್ರೂಜರ್ ಮುಖಾಂತರ ಕೈಲಾಸ ದರ್ಶನಕ್ಕೆ ಪ್ರಯಾಣ



ಕಾಲ್ನಡಿಗೆಯ ಮುಖಾಂತರ ಕೈಲಾಸ ದರ್ಶನ



ಕಾಲ್ನಡಿಗೆಯ ಮುಖಾಂತರ ಕೈಲಾಸ ದರ್ಶನ



ನಯನಮನೋಹರ ಮಾನಸ ಸರೋವರದ ದೃಶ್ಯ



ಗೌರಿಕುಂಡದ ಒಂದು ದೃಶ್ಯ



ಕೈಲಾಸ ಬೆಟ್ಟ (ಶಿವನ ವಾಸಸ್ಥಾನ)



ಕೈಲಾಸ ಬೆಟ್ಟ (ಶಿವನ ವಾಸಸ್ಥಾನ)

# ಅನುಬಂಧ – ೪

## ಆಕರಗ್ರಂಥಗಳು


| | ಲೇಖಕರ ಹೆಸರು | | ಕೃತಿಗಳು ಮತ್ತು ಪ್ರಕಾಶನ | ಪ್ರಕಟಣಾ ವರ್ಷ |
|---|---|---|---|---|
| ೧. | ಎ.ಎನ್.ಮೂರ್ತಿರಾವ್ | : | **ಅಪರವಯಸ್ಕನ ಅಮೇರಿಕಾ ಯಾತ್ರೆ** ಡಿ.ವ್ಹಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–೦೪ | ೨೦೦೪ |
| ೨. | ಕೆ.ಎನ್.ರಾವ್ | : | **ನಾ ಕಂಡ ನಾಲ್ಕೂರು** ಭಾರತಿ ಪ್ರಕಾಶನ, ದಾಂಡೇಲಿ(ಉ.ಕ) | ೧೯೯೪ |
| ೩. | ಕೆ.ಚಂದ್ರಮೌಳಿ | : | **ಪ್ರಜ್ವಲ ಕಾಶಿ** ಅಂಕಿತ ಪುಸ್ತಕ –೫೩ ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್, ಗಾಂಧಿ ಬಜಾರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು–೦೪ | ೧೯೯೬ |
| ೪. | ಕೆ.ಪಿ.ಪೂರ್ಣಚಂದ್ರ ತೇಜಸ್ವಿ | : | **ಅಲೇಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್** ಪುಸ್ತಕ ಪ್ರಕಾಶನ ೯೧, ೯ನೇ ಮುಖ್ಯ ರಸ್ತೆ ಸರಸ್ವತಿಪುರಂ, ಮೈಸೂರು–೦೯ | ೨೦೦೪ |
| ೫. | ಕೆ.ಸತ್ಯನಾರಾಯಣ | : | **ಸದ್ದು! ದೇವರು ಸ್ನಾನ ಮಾಡುತ್ತಿದ್ದಾರೆ** ಡಿ.ಕೆ.ಶ್ಯಾಮಸುಂದರರಾವ್. ಕಾಮಧೇನು ಪುಸ್ತಕ ಭವನ #೫/೧ ನಾಗಪ್ಪ ಬೀದಿ, ಶೇಷಾದ್ರಿಪುರಂ. ಬೆಂಗಳೂರು | ೨೦೧೦ |

| | | | | |
|---|---|---|---|---|
| ೬. | ಗುರುಬಸವ ಸುತ | : | **ಹಿಮಾಲಯ ಕ್ಷೇತ್ರ ದರ್ಶನ**<br>ಶ್ರೀ ಸದ್ಗುರು ಸಿದ್ಧಾರೂಢಸ್ವಾಮಿ<br>ಪ್ರಕಟನಾಲಯ ಬನಹಟ್ಟಿ. | ೨೦೧೦ |
| ೭. | ಚಿಂತಾಮಣಿ ಕೆ. ಜೋರಾಪೂರ | : | **ಹಿಂದೂಸ್ತಾನದ ಪಾವನಯಾತ್ರೆ**<br>ಪ್ರಲ್ಹಾದ ಪ್ರಕಾಶನ, ಎ.ಪಿ.ಎಮ್.ಸಿ.<br>ಮಾರ್ಕೆಟ್ ಯಾರ್ಡ್, ಬೆಳಗಾವಿ | ೨೦೦೭ |
| ೮. | ಜಿ.ಎನ್.ಮೋಹನ್ | : | **ನನ್ನೊಳಗಿನ ಹಾಡು ಕ್ಯೂಬಾ**<br>ಲೋಹಿಯಾ ಪ್ರಕಾಶನ 'ಕ್ಷಿತಿಜ' ಕಪ್ಪಗಲ್ಲು<br>ರಸ್ತೆ ಗಾಂಧಿನಗರ, ಬಳ್ಳಾರಿ-೦೨ | ೨೦೦೭ |
| ೯. | ಜಿ.ಪಿ.ಬಸವರಾಜ | : | **ಪಂಚಮುಖಿ ಪಂಜಾಬ**<br>ಲೋಹಿಯಾ ಪ್ರಕಾಶನ 'ಕ್ಷಿತಿಜ' ಕಪ್ಪಗಲ್ಲು<br>ರಸ್ತೆ ಗಾಂಧಿನಗರ, ಬಳ್ಳಾರಿ-೦೨ | ೨೦೦೮ |
| ೧೦. | ಜಿ.ಪಿ.ಬಸವರಾಜ | : | **ಕುಲು ಕಣಿವೆಯಲ್ಲಿ**<br>ಲೋಹಿಯಾ ಪ್ರಕಾಶನ 'ಕ್ಷಿತಿಜ' ಕಪ್ಪಗಲ್ಲು<br>ರಸ್ತೆ ಗಾಂಧಿನಗರ, ಬಳ್ಳಾರಿ-೦೨ | ೨೦೦೮ |
| ೧೧. | ಡಾ. 'ಜೀವಿ' ಕುಲಕರ್ಣಿ | : | **ಮತ್ತೊಮ್ಮೆ ಅಮೇರಿಕಾ ಪ್ರವಾಸ**<br>ಹರ್ಷವರ್ಧನ ಪ್ರಕಾಶನ, ೮ ಅ, ೧೫<br>ಜವಾಹರ ಸೊಸೈಟಿ, ಗೋವಿಂದ ನಗರ,<br>ಬೋರಿವಲಿ (ಪಶ್ಚಿಮ) ಮುಂಬಯಿ-೯೨ | ೨೦೦೭ |
| ೧೨. | ಡಾ. ಬಿ.ಎಸ್.ಸ್ವಾಮಿ | : | **ಬೆಳ್ಳಿ ಬೆಟ್ಟಗಳ ನಡುವೆ**<br>ನವೀನ ಪ್ರಕಾಶನ ೨೦೧-೭ನೇ ಎ<br>ಮುಖ್ಯರಸ್ತೆ ಸಿ.ಪಿ.ಸಿ ಲೇಔಟ್, ವಿಜಯ<br>ನಗರ ಪೂರ್ವ, ಬೆಂಗಳೂರು-೪೦ | ೧೯೮೮ |

| | | | |
|---|---|---|---|
| ೧೩. | ಡಾ. ಸಿ. ನಾಗಭೂಷಣ | : **ನಾ ಕಂಡ ಬ್ರೆಝಿಲ್**<br>ಲೋಹಿಯಾ ಪ್ರಕಾಶನ 'ಕ್ಷಿತಿಜ' ಕಪ್ಪಗಲ್ಲು<br>ರಸ್ತೆ ಗಾಂಧಿನಗರ, ಬಳ್ಳಾರಿ-೦೨ | ೨೦೦೬ |
| ೧೪. | ದೇಜಗೌ | : **ವಿದೇಶದಲ್ಲಿ ನಾಲ್ಕುವಾರ**<br>ಡಿ.ವ್ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ,<br>ಮೈಸೂರು-೦೪ | ೨೦೦೧ |
| ೧೫. | ನೇಮಿ ಚಂದ್ರ | : **ಪೆರುವಿನ ಪವಿತ್ರ ಕಣಿವೆಯಲ್ಲಿ**<br>ನವಕರ್ನಾಟಕ ಪಬ್ಲಿಕೇಷನ್ಸ್, ಪ್ರೈವೆಟ್<br>ಲಿಮಿಟೆಡ್, ಎಂಬಿಸಿ ಸೆಂಟರ್, ಕ್ರೆಸೆಂಟ್<br>ರಸ್ತೆ, ಬೆಂಗಳೂರು-೦೧ | ೨೦೦೬ |
| ೧೬. | ಬ.ನ.ಸುಂದರರಾವ್<br>ಶ್ರೀಮತಿ ರತ್ನಮ್ಮಾ ಸುಂದರರಾವ್ | : **ತಿರುಪತಿಯಿಂದ ಕನ್ಯಾಕುಮಾರಿವರೆಗೆ**<br>ವಸಂತ ಸಾಹಿತ್ಯಗ್ರಂಥಮಾಲಾ<br>೩೮ನೇ ಅಡ್ಡ ರಸ್ತೆ, ೯ ಮುಖ್ಯರಸ್ತೆ ೫ ನೇ<br>ಬ್ಲಾಕ್, ಜಯನಗರ ದಕ್ಷಿಣ,<br>ಬೆಂಗಳೂರು-೪೧ | ೧೯೯೪ |
| ೧೭. | ಮಮತಾರಾವ್ | : **ಕೈಲಾಸಾಧಿಪತಿಯ ಮನೆಯಂಗಳದಲ್ಲಿ**<br>ಅಭಿಜಿತ ಪ್ರಕಾಶನ್ ಮುಂಬಯಿ | ೨೦೦೭ |
| ೧೮. | ಮೋಹನ ಹೆಗಡೆ | : **ಸಾಗರದಿಂದ ಕೇದಾರ**<br>ಅಕ್ಷಯ ಪ್ರಕಾಶನ,<br>ನಂ-೨೨೯, ೩ನೇ ಮುಖ್ಯರಸ್ತೆ,<br>ಹನಮಂತ ನಗರ,<br>ಬೆಂಗಳೂರು-೧೯ | ೨೦೦೪ |

೧೯. ರಹಮತ ತರಿಕೇರೆ : **ಅಂಡಮಾನ್ ಕನಸು** ೨೦೦೪
ನವಕರ್ನಾಟಕ ಪಬ್ಲಿಕೇಷನ್ಸ್, ಪ್ರೈವೆಟ್
ಲಿಮಿಟೆಡ್, ಎಂಬಿಸಿ ಸೆಂಟರ್, ಕ್ರೆಸೆಂಟ್
ರಸ್ತೆ, ಬೆಂಗಳೂರು-೦೧

೨೦. ರಾ.ಯ.ಧಾರವಾಡಕರ : **ನಾ ಕಂಡ ಅಮೇರಿಕಾ** ೧೯೯೧
ಪವನ ಪ್ರಕಾಶನ, ಸಾರಸ್ವತಪುರ,
ಧಾರವಾಡ-೦೨

೨೧. ಲತಾ ಗುತ್ತಿ : **ಯುರೋ ನಾಡಿನಲ್ಲಿ** ೧೯೯೩
ಸುಂದರ ಪುಸ್ತಕ ಪ್ರಕಾಶನ, ಡಾ.ಗುಜ್ಜರ
ಕಂಪೌಂಡ್, ೧ನೇ ಅಡ್ಡರಸ್ತೆ, ಸಪ್ತಾಪುರ
ಧಾರವಾಡ-೦೧

೨೨. ಲೀಲಾ ಮಿರ್ಲೆ : **ಪ್ರವಾಸ** ೧೯೯೫
ಕರ್ನಾಟಕ ಬುಕ್ ಎಜನ್ಸಿ, ತುಂಗಾ
ಕಾಂಪ್ಲೆಕ್ಸ್ ಗಾಂಧಿನಗರ, ಬೆಂಗಳೂರು-೦೯

೨೩. ವಿದ್ವಾನ್ ರಘುಸುತ : **ಆಳ್ವಾರರು ಕಂಡ ೧೦೮ ದಿವ್ಯ ದೇಶಗಳು** ೧೯೯೬
ಪುಲಕೇಶಿ ಪ್ರಕಾಶನ, ಪುಲಕೇಶಿ ರಸ್ತೆ,
೧ ನೇ ಮೇನ್, ಯಶವಂತಪುರ,
ಬೆಂಗಳೂರು-೨೨

೨೪. ವೆಂಕಟೇಶ ಮಾಚಕನೂರ : **ಆಗ್ನೇಯದಂಗಳದಲ್ಲಿ** ೨೦೦೯
ಲೋಹಿಯಾ ಪ್ರಕಾಶನ
'ಕ್ಷಿತಿಜ' ಕಪ್ಪಗಲ್ಲು ರಸ್ತೆ ಗಾಂಧಿನಗರ,
ಬಳ್ಳಾರಿ-೦೨

೨೫. ವೆಂಕಟೇಶ ಮಾಚಕನೂರ : **ಕೈಲಾಸ–ಮಾನಸ** ೨೦೧೧
ವಿಮೋಚನಾ ಪ್ರಕಾಶನ,ಅಥಣಿ

೨೬. ವೆಂಕಟೇಶ ಮಾಚಕನೂರ : **ಗಾಂಧಿ–ಕೃಷ್ಣರ ನಾಡಿನಲ್ಲಿ** ೨೦೧೧
ಲೋಹಿಯಾ ಪ್ರಕಾಶನ 'ಕ್ಷಿತಿಜ' ಕಪ್ಪಗಲ್ಲು
ರಸ್ತೆ ಗಾಂಧಿನಗರ, ಬಳ್ಳಾರಿ–೦೨

೨೭. ವೆಂಕಟೇಶ ಮಾಚಕನೂರ : **ಥೇಮ್ಸ್‌ದಿಂದ ಟೈಬರ್‌ವೆಗೆ** ೨೦೦೭
ಲೋಹಿಯಾ ಪ್ರಕಾಶನ 'ಕ್ಷಿತಿಜ' ಕಪ್ಪಗಲ್ಲು
ರಸ್ತೆ ಗಾಂಧಿನಗರ, ಬಳ್ಳಾರಿ–೦೨

೨೮. ಸ್ವಾಮಿ ಅಖಂಡಾನಂದ. : **ಹಿಮಾಲಯದ ಮಡಿಲಲ್ಲಿ** ೨೦೧೧
ಶ್ರೀ ರಾಮಕೃಷ್ಣ ಆಶ್ರಮ ಯಾದವಗಿರಿ.
ಮೈಸೂರು

೨೯. ಸ್ವಾಮಿ ಸೋಮನಾಥಾನಂದ : **ಹಿಮಾಲಯ ಯಾತ್ರೆ** ೨೦೦೯
ಶ್ರೀ ರಾಮಕೃಷ್ಣ ಆಶ್ರಮ ಯಾದವಗಿರಿ.
ಮೈಸೂರು

# ಅನುಬಂಧ – ೫

## ಲೇಖನಗಳು

| | ಲೇಖಕರ ಹೆಸರು | ಕೃತಿಗಳು ಮತ್ತು ಪ್ರಕಾಶನ | ಪ್ರಕಟಣಾ ವರ್ಷ |
|---|---|---|---|
| ೧. | ಡಾ.ವ್ಹಿ.ಎಸ್.ಮಾಳಿ | **ಕೈಲಾಸ ಮಾನಸ ಒಂದು ಹಾರ್ದಿಕ ವಿಶ್ಲೇಷಣೆ.** ಮಾಚಕನೂರರ ಸಾಹಿತ್ಯಲೋಕ ಸಂ.ಡಾ.ಗುರುಪಾದ ಮರಿಗುದ್ದಿ | ೨೦೧೧ |
| ೨. | ಡಾ. ವಿಜಯಕುಮಾರ ಕಟಗೀಹಳ್ಳಿಮಠ | **ಕೈಲಾಸ ಮಾನಸ ಪ್ರವೇಶಿಸಿದಾಗ** ಮಾಚಕನೂರರ ಸಾಹಿತ್ಯಲೋಕ ಸಂ.ಡಾ.ಗುರುಪಾದ ಮರಿಗುದ್ದಿ | ೨೦೧೧ |
| ೩. | ಸ್ವಾಮಿ ಗೌರಾಂಗಾನಂದ | **ಕೈಲಾಸ ಮಾನಸ ಸರೋವರ ನಿಸರ್ಗದ ಸ್ವರ್ಗೀಯ ನೋಟ** ವಿವೇಕ ಪ್ರಭ | ೧)ಮಾರ್ಚ- ೨೦೧೨ ೨)ಏಪ್ರೀಲ್- ೨೦೧೨ |
| ೪. | ಸಿ. ಎಲ್. ಮಹಾದೇವ ಜೋಯಿಸ್ | **ಕೈಲಾಸ ಶಿಖರೇ ರಮ್ಯ** ನವಚಿಂತನ–ರಾಮಕೃಷ್ಣ ವಿವೇಕಾನಂದ ಆಶ್ರಮ ಧಾರವಾಡ–೭ | ಜುಲೈ–೨೦೦೯ |
| ೫. | ಸಿ. ಎಲ್. ಮಹಾದೇವ ಜೋಯಿಸ್ | **ಕೈಲಾಸ ಶಿಖರೇ ರಮ್ಯ** ನವಚಿಂತನ–ರಾಮಕೃಷ್ಣ ವಿವೇಕಾನಂದ ಆಶ್ರಮ ಧಾರವಾಡ–೭ | ಜನೇವರಿ–೨೦೧೦ |
| ೬. | ಸಿ. ಎಲ್. ಮಹಾದೇವ ಜೋಯಿಸ್ | **ಕೈಲಾಸ ಶಿಖರೇ ರಮ್ಯ** ನವಚಿಂತನ–ರಾಮಕೃಷ್ಣ ವಿವೇಕಾನಂದ ಆಶ್ರಮ ಧಾರವಾಡ–೭ | ಏಪ್ರೀಲ್–೨೦೧೦ |

| | | | |
|---|---|---|---|
| ೭. | ಸಿ. ಎಲ್. ಮಹಾದೇವ ಜೋಯಿಸ್ | **ಕೈಲಾಸ ಶಿಖರೇ ರಮ್ಯ**<br>ನವಚಿಂತನ–ರಾಮಕೃಷ್ಣ ವಿವೇಕಾನಂದ<br>ಆಶ್ರಮ ಧಾರವಾಡ–೭ | ಜುಲೈ–೨೦೧೦ |
| ೮. | ಸಿ. ಎಲ್. ಮಹಾದೇವ ಜೋಯಿಸ್ | **ಕೈಲಾಸ ಶಿಖರೇ ರಮ್ಯ**<br>ನವಚಿಂತನ–ರಾಮಕೃಷ್ಣ ವಿವೇಕಾನಂದ<br>ಆಶ್ರಮ ಧಾರವಾಡ–೭ | ಅಕ್ಟೋಬರ್–<br>೨೦೧೦ |
| ೯. | ಸಿ. ಎಲ್. ಮಹಾದೇವ ಜೋಯಿಸ್ | **ಕೈಲಾಸ ಶಿಖರೇ ರಮ್ಯ**<br>ನವಚಿಂತನ–ರಾಮಕೃಷ್ಣ ವಿವೇಕಾನಂದ<br>ಆಶ್ರಮ ಧಾರವಾಡ–೭ | ಜನೇವರಿ–೨೦೧೧ |
| ೧೦. | ಸಿ. ಎಲ್. ಮಹಾದೇವ ಜೋಯಿಸ್ | **ಕೈಲಾಸ ಶಿಖರೇ ರಮ್ಯ**<br>ನವಚಿಂತನ–ರಾಮಕೃಷ್ಣ ವಿವೇಕಾನಂದ<br>ಆಶ್ರಮ ಧಾರವಾಡ–೭ | ಜುಲೈ–೨೦೧೧ |
| ೧೧. | ಸಿ. ಎಲ್. ಮಹಾದೇವ ಜೋಯಿಸ್ | **ಕೈಲಾಸ ಶಿಖರೇ ರಮ್ಯ**<br>ನವಚಿಂತನ–ರಾಮಕೃಷ್ಣ ವಿವೇಕಾನಂದ<br>ಆಶ್ರಮ ಧಾರವಾಡ–೭ | ಅಕ್ಟೋಬರ್–<br>೨೦೧೧ |